# AMARNATH & VAISHNAVI DEVI YATRA





Delhi, Amritsar, Attari Border, Amarnath, Srinagar, Gulmarg, Vaishnavi Devi, Kurukshtra

**JUNE 25, JULY 01**

# Mt. Kailash & Manasa Sarovar Yatra

June 30
July 07, 18, 27
Sep 06, 15



## Highlights

| | | | | |
|---|---|---|---|---|
| Doctor / Nurse will accompany | Experience of over a decade | Most percentage of satisfied customers | Vegetarian Food | Homa & Pooja facilities at Manasa Sarovar |
| | Avail Rs. 30,000/- subsidy from Karnataka Govt. (Karnataka Citizens only) | Briefing Session at Bangalore | Bangalore Staff will accompany | Assistance in availing Travel Insurance |



ಜೂನ್ 2014

ಸಂಪುಟ 15 ಸಂಚಿಕೆ 06

# ವಿವೇಕಪ್ರಭ






















**ವ್ಯವಸ್ಥಾಪಕ ಸಂಪಾದಕರು**
*ಸ್ವಾಮಿ ಮುಕ್ತಿದಾನಂದ*

**ಸಂಪಾದಕರು**
*ಸ್ವಾಮಿ ವೀರೇಶಾನಂದ*

**ನೆರವು:**
*ಆರ್. ಎಸ್. ಪೂರ್ಣಾನಂದ*
*ಎನ್. ಎಸ್. ಶಾರದಾಪ್ರಸಾದ್*
*ಡಾ. ಕೆ. ಎಲ್. ಪ್ರಸನ್ನಾಕ್ಷಿ*
*ಡಾ. ಎಚ್. ಪಾಂಡುರಂಗ ವಿಠಲ*
*ನರಸಿಂಹಮೂರ್ತಿ*

**ಅಕ್ಷರ ಜೋಡಣೆ**
*ಶ್ರೀರಾಮಕೃಷ್ಣ ಆಶ್ರಮ, ಮೈಸೂರು*

**ಮುದ್ರಣ**
*ಮಯೂರ್ ಗ್ರಾಫಿಕ್ಸ್, ಬೆಂಗಳೂರು*

**E-mail:**
vivekaprabha@hotmail.com
kannada.vivekaprabha@gmail.com
**Website:** vivekaprabha.net
**ಫೋನ್ :** 9481533505

**ಮುಖಪುಟ:**
ಗೀತಾಚಾರ್ಯನಾದ ಶ್ರೀಕೃಷ್ಣ, ಸಾಂಪ್ರದಾಯಿಕ ಚಿತ್ರ

**ಈ ಪತ್ರಿಕೆಯ ಧ್ಯೇಯ**

ನಾವು ಪತ್ರಿಕೆಯ ಮೂಲಕ ಸಕಲ ವಿಚಾರಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.
– ಸ್ವಾಮಿ ವಿವೇಕಾನಂದ

**ಚಂದಾ ವಿವರ :** ಬಿಡಿ ಪ್ರತಿ: ₹ 14; ವಾರ್ಷಿಕ: ₹ 140; ಮೂರು ವರ್ಷ: ₹ 375; ಆಜೀವ (25 ವರ್ಷ): ₹ 3,000; ಪೋಷಕ ಸಹಾಯಧನ: ₹ 5,000 ಅಥವಾ ಹೆಚ್ಚು. ವಿದೇಶಗಳಿಗೆ: (ಏರ್‌ಮೇಲ್): ವಾರ್ಷಿಕ: $20; ಮೂರು ವರ್ಷ: $60; ಆಜೀವ (25 ವರ್ಷ): $300; ಪೋಷಕ ಸಹಾಯಧನ: $600 ಅಥವಾ ಹೆಚ್ಚು.

ಚಂದಾ ಹಣವನ್ನು (Sri Ramakrishna Ashrama, Viveka Prabha A/c ಹೆಸರಿಗೆ) ಎಂ.ಓ. ಅಥವಾ ಡಿ.ಡಿ. ಮೂಲಕ ಮಾತ್ರ ಕಳುಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20 ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-G ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.

# ಪ್ರಾರ್ಥನೆ

**ಪಾರ್ಥಾಯ ಪ್ರತಿಬೋಧಿತಾಂ ಭಗವತಾ ನಾರಾಯಣೇನ ಸ್ವಯಂ**
**ವ್ಯಾಸೇನ ಗ್ರಥಿತಾಂ ಪುರಾಣಮುನಿನಾ ಮಧ್ಯೇ ಮಹಾಭಾರತಮ್ ।**
**ಅದ್ವೈತಾಮೃತವರ್ಷಿಣೀಂ ಭಗವತೀಂ ಅಷ್ಟಾದಶಾಧ್ಯಾಯಿನೀಂ**
**ಅಂಬ ತ್ವಾಮನುಸಂದಧಾಮಿ ಭಗವದ್ಗೀತೇ ಭವದ್ವೇಷಿಣೀಮ್ ॥**



ಅಮ್ಮ, ಭಗವದ್ಗೀತೆ, ಸ್ವತಃ ಭಗವಂತನಾದ ಶ್ರೀಮನ್ನಾರಾಯಣನಿಂದ ಪಾರ್ಥನಿಗೆ ಉಪದೇಶಿಸಲ್ಪಟ್ಟ, ಪ್ರಾಚೀನ ಮಹರ್ಷಿಗಳಾದ ವ್ಯಾಸರಿಂದ ಮಹಾಭಾರತದ ಮಧ್ಯದಲ್ಲಿ ಸೇರಿಸಲ್ಪಟ್ಟ, ಅದ್ವೈತಾ ಮೃತವನ್ನು ವರ್ಷಿಸುತ್ತಿರುವ, ಸಂಸಾರನಾಶಿನಿಯಾದ, ಹದಿನೆಂಟು ಅಧ್ಯಾಯಗಳುಳ್ಳ, ಭಗವತಿಯಾದ ನಿನ್ನನ್ನು ಧ್ಯಾನಿಸುತ್ತೇನೆ.

**ಸರ್ವೋಪನಿಷದೋ ಗಾವೋ ದೋಗ್ಧಾ ಗೋಪಾಲನಂದನಃ ।**
**ಪಾರ್ಥೋ ವತ್ಸಃ ಸುಧೀರ್ಭೋಕ್ತಾ ದುಗ್ಧಂ ಗೀತಾಮೃತಂ ಮಹತ್ ॥**

ಎಲ್ಲ ಉಪನಿಷತ್ತುಗಳು ಗೋವುಗಳು; ಗೋಪಾಲನಂದನನು (ಕೃಷ್ಣನು) ಹಾಲು ಕರೆಯುವವನು; ಅರ್ಜುನನೇ ಕರು; ಮಹತ್ತಾದ ಗೀತಾಮೃತವೇ ಹಾಲು; ಜ್ಞಾನಿಗಳು ಅದನ್ನು ಕುಡಿಯುವವರು.

**ಪಾರಾಶರ್ಯವಚಃಸರೋಜಮಮಲಂ ಗೀತಾರ್ಥಗಂಧೋತ್ಕಟಂ**
**ನಾನಾಖ್ಯಾನಕಕೇಸರಂ ಹರಿಕಥಾಸಂಬೋಧನಾಬೋಧಿತಮ್ ।**
**ಲೋಕೇ ಸಜ್ಜನಷಟ್ಪದೈರಹರಹಃ ಪೇಪೀಯಮಾನಂ ಮುದಾ**
**ಭೂಯಾದ್ಭಾರತಪಂಕಜಂ ಕಲಿಮಲಪ್ರಧ್ವಂಸಿ ನಃ ಶ್ರೇಯಸೇ ॥**

ಪರಾಶರಪುತ್ರರಾದ ವ್ಯಾಸರ ವಚನವೆಂಬ ಸರೋವರದಲ್ಲಿ ಹುಟ್ಟಿದ, ನಾನಾ ಬಗೆಯ ಆಖ್ಯಾನಗಳೆಂಬ ಕೇಸರಗಳಿಂದ ಕೂಡಿದ, ಹರಿಕಥೆಯೆಂಬ ಬೋಧನೆಯಿಂದ ವಿಕಸಿತವಾದ, ಸಜ್ಜನರೆಂಬ ಭ್ರಮರಗಳಿಂದ ಪ್ರತಿದಿನವೂ ಸಂತೋಷದಿಂದ ಸೇವಿಸಲ್ಪಡುತ್ತಿರುವ, ಕಲಿಕಲ್ಮಷವನ್ನು ನಾಶಮಾಡುವ, ಗೀತಾರ್ಥವೆಂಬ ಉತ್ಕಟ ಪರಿಮಳದಿಂದ ಕೂಡಿರುವ, ನಿರ್ಮಲವಾದ ಮಹಾಭಾರತವೆಂಬ ಪಂಕಜವು ನಮಗೆ ಶ್ರೇಯಸ್ಸನ್ನುಂಟುಮಾಡಲಿ.

**ಮೂಕಂ ಕರೋತಿ ವಾಚಾಲಂ ಪಂಗುಂ ಲಂಘಯತೇ ಗಿರಿಮ್ ।**
**ಯತ್ಕೃಪಾ ತಮಹಂ ವಂದೇ ಪರಮಾನಂದಮಾಧವಮ್ ॥**

ಯಾರ ಕೃಪೆಯು ಮೂಕನನ್ನು ವಾಚಾಳಿಯನ್ನಾಗಿ ಮಾಡುವುದೋ, ಕುಂಟನು ಪರ್ವತವನ್ನು ಲಂಘಿಸುವಂತೆ ಮಾಡುವುದೊ ಅಂತಹ ಪರಮಾನಂದಸ್ವರೂಪನಾದ ಮಾಧವನನ್ನು ವಂದಿಸುತ್ತೇನೆ. ◆

**(‘ಭಗವದ್ಗೀತೆ’ಯ ಧ್ಯಾನಶ್ಲೋಕಗಳಿಂದ)**

# ಭಗವಾನ್ ಶ್ರೀಕೃಷ್ಣನ ಉಪದೇಶಗಳು



**ಜನನ ಮರಣಗಳನ್ನು ದಾಟಿ ಅಮೃತತ್ವದ ದಡವನ್ನು ಸೇರುವುದೇ ಈ ಜೀವನದ ಗುರಿ.**

**ರಾಜ್ಯವೇ ಮೊದಲಾದ ಬಾಹ್ಯವಸ್ತುಗಳನ್ನು ತ್ಯಜಿಸುವುದರಿಂದ ಮೋಕ್ಷವು ಲಭಿಸಲಾರದು; ಇಂದ್ರಿಯಸುಖವನ್ನು ತಣಿಸುವ ವಿಷಯಗಳನ್ನು ತ್ಯಜಿಸುವುದರಿಂದ ಅದರ ಲಾಭವುಂಟಾಗುವುದು.**

**ಮಾನವದೇಹವು ದೋಣಿಯಿದ್ದಂತೆ. ಜನನ ಮರಣವೆಂಬ ಸಾಗರವನ್ನು ದಾಟಿಸಿ ಅಮೃತತ್ವದ ದಡವನ್ನು ತಲುಪಿಸುವುದೇ ಅದರ ಮೊದಲನೆಯ ಹಾಗೂ ಅತ್ಯುತ್ತಮವಾದ ಉಪಯೋಗ.**

**ಗುರು ಸಮರ್ಥನಾದ ಅಂಬಿಗ; ಭಗವದ್‌ಕೃಪೆ ಸಹಕಾರಿಯಾದ ಗಾಳಿ. ಇವೆರಡೂ ಇರುವಾಗ ಮನುಷ್ಯನು ಸಂಸಾರಸಾಗರವನ್ನು ದಾಟಲು ಯತ್ನಿಸದಿದ್ದರೆ, ಆಧ್ಯಾತ್ಮಿಕವಾಗಿ ಅವನು ಸತ್ತಂತೆ.**

**ಸತ್ಯಕ್ಕೆ ಅನೇಕ ದೃಷ್ಟಿಕೋನಗಳಿವೆ. ಅನಂತವಾದ ಸತ್ಯ ಅನಂತವಾದ ರೀತಿಯಲ್ಲಿ ವ್ಯಕ್ತವಾಗುವುದು. ಋಷಿಗಳು ಒಂದೇ ಸತ್ಯವನ್ನು ಹಲವು ರೀತಿಯಲ್ಲಿ ಹೇಳುವರು.**

**ಅತ್ಯಂತ ಉತ್ತಮವಾದುದು ಬೇಕಿದ್ದರೆ ನಿಮ್ಮಲ್ಲಿ ಸಮತ್ವವಿರಬೇಕು. ಅತ್ಯಂತ ವಿರುದ್ಧವಾದ ಸನ್ನಿವೇಶ ಎದುರಾದರೂ ನಿಮ್ಮ ಸಮತೋಲನವನ್ನು ಕಾಪಾಡಿಕೊಳ್ಳಿ.**

**ಈ ಲೋಕದಲ್ಲಿ ಜ್ಞಾನಕ್ಕೆ ಸಮಾನವಾದ ಪವಿತ್ರವಸ್ತು ಯಾವುದೂ ಇಲ್ಲ. ಯೋಗದಿಂದ ಸಂಸಿದ್ಧಿಯನ್ನು ಹೊಂದಿದವನು ಕಾಲಕ್ರಮದಲ್ಲಿ ಆ ಜ್ಞಾನವನ್ನು ಹೊಂದುವನು.** ◆ *(‘ಶ್ರೀಕೃಷ್ಣ ಸೂಕ್ತಿ’ ಯಿಂದ)*



ಸಂಪಾದಕೀಯ

# ಬುದ್ಧ ತೋರಿದ ಮಾರ್ಗ

**(ಹಿಂದಿನ ಸಂಚಿಕೆಯಲ್ಲಿ ಬೌದ್ಧಧರ್ಮದ ಮೊದಲ ಆರ್ಯ ಸತ್ಯವಾದ 'ದುಃಖ' ದ ಬಗ್ಗೆ ಚರ್ಚಿಸಲಾಗಿತ್ತು.)**

ಸಮುದಯ: ಸಮುದಯ ಎನ್ನುವುದು ಬೌದ್ಧ ಧರ್ಮದ ಎರಡನೆಯ ಆರ್ಯಸತ್ಯ. ದೇವರು ಅಥವಾ ಇನ್ನಾವುದೇ ಬಾಹ್ಯ ಸಂಗತಿಯು ದುಃಖದ ಕಾರಣ ಅಥವಾ ಆಕರವೆನ್ನುವುದನ್ನು ಬೌದ್ಧ ಧರ್ಮ ಸರ್ವಥಾ ನಿರಾಕರಿಸುತ್ತದೆ. ಅಂಥ ಕಾರಣ ಅಥವಾ ಆಕರವನ್ನು ಮಾನವನ ವ್ಯಕ್ತಿತ್ವದ ಅಂತರಾಳದಲ್ಲಿಯೇ ಅನ್ವೇಷಿಸಲು ಅದು ಉತ್ತೇಜನ ನೀಡುತ್ತದೆ. ಈ ವಿಷಯದಲ್ಲಿ ಬುದ್ಧನ ಬೋಧನೆ ಹೀಗಿದೆ: ತನ್ಹಾ ಅಥವಾ ತೃಷ್ಣಾ (ಆಸೆ) ಪುರ್ನಜನ್ಮ ಅಥವಾ ಪುನರಸ್ತಿತ್ವಕ್ಕೆ ಕಾರಣವಾಗುತ್ತದೆ. ಏಕೆಂದರೆ, ತೃಷ್ಣೆಯೇ ಮತ್ತೆ ಮತ್ತೆ ಹುಟ್ಟಿ ಬರಬೇಕೆಂಬ ಮತ್ತು ಯಾವತ್ತೂ ನಾಶವಾಗದೆ ಇರಬೇಕೆಂಬ ಬಯಕೆಗೆ ಕಾರಣವಾಗುತ್ತದೆ. ಇವುಗಳ ಜೊತೆಗೆ, ತೃಷ್ಣೆಯು ತೀವ್ರ ಭೋಗೇಚ್ಛೆ ಮತ್ತು ಹೊಸ ಹೊಸ ಉನ್ಮಾದದ ಅನುಭವಗಳನ್ನು ಅಲ್ಲಿ ಇಲ್ಲಿ ಹುಡುಕುವ ಪ್ರವೃತ್ತಿಯ ಮೂಲ ಆಕರವೂ ಹೌದು. ಅವುಗಳಲ್ಲಿ ಮೂರು ವಿಧ: ೧. ಕಾಮ ತನ್ಹಾ : ಇಂದ್ರಿಯ ಲೋಲುಪತನ ೨. ಭಾವ ತನ್ಹಾ : ಯಾವತ್ತೂ ಇರಬೇಕೆಂಬ ಬಯಕೆ ೩. ವಿಭವ ತನ್ಹಾ : ಇಲ್ಲವಾಗುವ ಅಥವಾ ಸಂಪೂರ್ಣ ಶೂನ್ಯವಾಗುವ ಆಸೆ (ದುಃಖವನ್ನು ತಪ್ಪಿಸಿಕೊಳ್ಳುವ ಪಲಾಯನಕಾರಿ ಮನೋಭಾವ).

ದುಃಖವೆನ್ನುವುದು ತನ್ಹಾ ಅಥವಾ ತೃಷ್ಣೆಯ ಫಲಸ್ವರೂಪ. ಹೇಗೆ ಬೀಜದಿಂದ ಗಿಡ ಮೊಳೆತು, ಅದು ಹಣ್ಣುಗಳನ್ನು ಬಿಡುತ್ತದೆಯೋ ಅದೇ ರೀತಿ, ತೃಷ್ಣೆಯು ವಿಕಾಸವಾಗುತ್ತ ಬಗೆಬಗೆಯ ಸಂಕೀರ್ಣ ರೂಪಗಳನ್ನು ತಾಳಿ ದುಃಖವೆಂಬ ಫಲವನ್ನು ಕೊಡುತ್ತದೆ. ಈ ಪ್ರಕ್ರಿಯೆಯನ್ನು ಕ್ರಿಯೆ-ಪ್ರತಿಕ್ರಿಯೆಗೂ ಹೋಲಿಸಬಹುದು. ತೃಷ್ಣೆಯು ಇಲ್ಲಿ ಕ್ರಿಯೆಯಾದರೆ, ಇದರಿಂದ ಸಹಜವಾಗಿ ಹೊರಹೊಮ್ಮುವ ಪ್ರತಿಕ್ರಿಯೆಯೇ ದುಃಖ. ಹಾಗೆಯೇ ಇದನ್ನು ಕಾರ್ಯ-ಕಾರಣಗಳಿಗೂ ಹೋಲಿಸುತ್ತಾರೆ. ಮಣ್ಣು ಎಂಬ ಕಾರಣದಿಂದ ಮಡಕೆ ಉಂಟಾಗುತ್ತದೆ. ಹಾಗೆಯೇ ತೃಷ್ಣೆ ಎನ್ನುವ 'ಕಾರಣ' ದಿಂದ ದುಃಖವೆಂಬ 'ಕಾರ್ಯ' ಉಂಟಾಗುತ್ತದೆ. ಈ ಎಲ್ಲ ದೃಷ್ಟಾಂತಗಳು ತೃಷ್ಣೆ, ದುಃಖಗಳ ಸಂಬಂಧದ ಸಾರ್ವತ್ರಿಕತೆ ಮತ್ತು ವಿಶ್ವವ್ಯಾಪಕತೆಗಳನ್ನು ಅರ್ಥಮಾಡಿಕೊಳ್ಳುವುದಕ್ಕೆ ನಮಗೆ ನೆರವಾಗುತ್ತವೆ.

ಬೌದ್ಧಧರ್ಮದ ಪ್ರಕಾರ ತೃಷ್ಣೆಯು ಇಡೀ ಜಗತ್ತಿನಲ್ಲಿಯೇ ಅತ್ಯಂತ ಬಲಿಷ್ಠವಾದ ಶಕ್ತಿರೂಪವಾಗಿದೆ. ಇದು ಮಾನಸಿಕ ವೃತ್ತಿಗಳ ಸ್ವರೂಪವನ್ನು ತಾಳುವುದು ನಮಗೆಲ್ಲ ತಿಳಿದ ವಿಷಯವೇ ಸರಿ. ಇದನ್ನೇ ಕಾತರಿಸುವುದು, ಹಪಹಪಿಸುವುದು, ದಾಹ ಮುಂತಾದ ಹಲವು ಪದಗಳಿಂದ ಕರೆಯುತ್ತೇವೆ. ಈ ಜಗತ್ತು ಇದೆಯೆಂಬ ಭ್ರಮೆಯನ್ನು ನಮ್ಮಲ್ಲಿ ಉಂಟುಮಾಡುವುದಕ್ಕೆ ತೃಷ್ಣೆಯೇ ಕಾರಣ. ಹಾಗೆಯೇ ಈ ಭ್ರಮೆಯು ನಿರಂತರವಾಗಿ, ಅಡೆತಡೆಯಿಲ್ಲದೆ ಮುಂದುವರೆದುಕೊಂಡು ಹೋಗುತ್ತಿರುವುದಕ್ಕೂ ಅದೇ ಮೂಲ.

ಇಡೀ ಜೀವನವೇ ತೃಷ್ಣೆ ಅಥವಾ ಆಸೆಗಳ ಮೇಲೆ ಅವಲಂಬಿತವಾಗಿದೆ. ಬೌದ್ಧಧರ್ಮದ ಪ್ರಕಾರ, ತೃಷ್ಣೆಯು ವರ್ತಮಾನದ ಸ್ಥಿತಿಗತಿಯ ಪ್ರೇರಕಶಕ್ತಿ ಮಾತ್ರವಲ್ಲ, ಭೂತ ಮತ್ತು ಭವಿಷ್ಯತ್ತುಗಳಲ್ಲಿನ ಅಸ್ತಿತ್ವದ ಪ್ರಚೋದಕವೂ ಹೌದು. ಏಕೆಂದರೆ ಭೂತಕಾಲ ಮತ್ತು ಭವಿಷ್ಯತ್ ಕಾಲಗಳಲ್ಲಿ ಜನರು ಅನುಭವಿಸಿದ ಮತ್ತು ಅನುಭವಿಸುವ ಎಲ್ಲ ರೀತಿಯ ದುಃಖಕ್ಕೂ ತೃಷ್ಣೆ ಅಥವಾ ಆಸೆಯೇ ಮೂಲ ಆಕರ. ಇದೊಂದು ಕಾರ್ಯ-ಕಾರಣ ನಿಯಮದ ಅಖಂಡ ಪ್ರಕ್ರಿಯೆ. ಈ ತೃಷ್ಣಾಶಕ್ತಿಯನ್ನು ನದೀಪ್ರವಾಹಕ್ಕೆ ಹೋಲಿಸಬಹುದು. ನದಿಯ ಪ್ರವಾಹವು ಹಳ್ಳಿಗಳು, ನಗರಗಳು ಎಲ್ಲವನ್ನೂ ಮುಳುಗಿಸಿಬಿಡುತ್ತದೆ. ಅದೇ ರೀತಿ ತೃಷ್ಣೆಯು ಜೀವನದ ಎಲ್ಲ ಅಂಗಗಳನ್ನು ಆಕ್ರಮಿಸಿಕೊಂಡು, ಅದೆಲ್ಲವನ್ನೂ ದುಃಖಮಯವನ್ನಾಗಿ ಮಾಡಿಬಿಡುತ್ತದೆ. ಹಾಗೆಯೇ ತೃಷ್ಣೆಯನ್ನು ಉರಿಯುತ್ತಿರುವ ಬೆಂಕಿಯ ಉರುವಲಿಗೆ ಹೋಲಿಸುತ್ತಾರೆ. ತೃಷ್ಣೆಯೆಂಬ ಉರುವಲು ಎಲ್ಲಿಯವರೆಗೆ ಇರುತ್ತದೆಯೋ, ಅಲ್ಲಿಯವರೆಗೆ ಈ

ಅಸ್ತಿತ್ವವೆಂಬ ಅಥವಾ ಜಗತ್ತೆಂಬ ಭ್ರಮೆಯು ಕಾಣುತ್ತಿರುತ್ತದೆ. ಈ ವಿಷಯಕ್ಕೆ ಸಂಬಂಧಪಟ್ಟಂತೆ ಬುದ್ಧ ಹೀಗೆ ಹೇಳುತ್ತಾನೆ: "ಭಿಕ್ಷುಗಳೇ, ಇಷ್ಟೊಂದು ದೀರ್ಘಕಾಲದ ತನಕ ಮಾನವ ಜೀವಿಗಳನ್ನು ಕಟ್ಟಿಹಾಕಿರುವ ಇನ್ನೊಂದು ಬಂಧನವನ್ನು ನಾನು ಕಾಣೆನು. ಇದು ಜೀವಿಯನ್ನು ಅಸ್ತಿತ್ವವೆಂಬ ಚಕ್ರ ದಲ್ಲಿ ಬಹುಕಾಲ ಅಲೆದಾಡುತ್ತಿರುವಂತೆ, ಸುತ್ತುತ್ತಿರುವಂತೆ ಮಾಡು ವುದು. ಓ ಭಿಕ್ಷುಗಳೇ, ನಿಜವಾಗಿಯೂ ತೃಷ್ಣೆಯೆಂಬ ಈ ಬಂಧನಕ್ಕೆ ಕಟ್ಟುಬಿದ್ದೇ, ಜೀವಿಗಳೆಲ್ಲರೂ ಅಸ್ತಿತ್ವದ ಚಕ್ರದಲ್ಲಿ ದಿಕ್ಕು ತೋರದಂತೆ ಆತುರಾತುರವಾಗಿ ಅಲೆದಾಡುತ್ತಿರುವರು, ಸುತ್ತುತ್ತ ಇರುವರು."

**ನಿರೋಧ:** ಬುದ್ಧ ಬೋಧಿಸಿದ ಮೂರನೆಯ ಆರ್ಯಸತ್ಯವೆಂದರೆ, ನಿರೋಧ ಅಥವಾ ದುಃಖದ ಸರ್ವಥಾ ಉಪಶಮನ. ಇದನ್ನು ಪಾಲಿ ಭಾಷೆಯಲ್ಲಿ ನಿಬ್ಬಾಣ (ಸಂಸ್ಕೃತದಲ್ಲಿ 'ನಿರ್ವಾಣ') ಎಂದು ಕರೆಯುತ್ತಾರೆ. ಈ ಪದವನ್ನು ನಿ+ವಾನ ಎಂದು ಬಿಡಿಸಬಹುದು. ಇದರರ್ಥ ತೃಷ್ಣೆ ಅಥವಾ ಅತ್ಯಾಸಕ್ತಿಯಿಂದ ಬಿಡುಗಡೆ ಎಂದು. ಹಾಗೆಯೇ ನಿರ್+ವಾಣ ಎಂದೂ ಬಿಡಿಸಬಹುದು. ಇದರರ್ಥ, ಬೀಸುತ್ತಿರುವುದನ್ನು ಶಮನ ಮಾಡುವುದು ಅಥವಾ ಉರಿಯುತ್ತಿರುವುದನ್ನು ಆರಿಸುವುದು ಎಂದು. ಈಗ ಬೌದ್ಧಧರ್ಮದ ದೃಷ್ಟಿಯಿಂದ ನಿರ್ವಾಣವೆಂದರೆ ಏನು ಎನ್ನುವುದನ್ನು ತಿಳಿದುಕೊಳ್ಳಲು ಹಲವಾರು ದೃಷ್ಟಿಕೋನಗಳಿಂದ ಪ್ರಯತ್ನಿಸೋಣ:

೧. ನಾವು ನಿರ್ವಾಣವೆಂದರೆ ಏನು ಎಂದು ತಿಳಿದುಕೊಳ್ಳಲು ಪ್ರಯತ್ನಿಸುವುದಕ್ಕಿಂತ ನಿರ್ವಾಣವೆಂದರೆ ಯಾವುದು ಅಲ್ಲ ಎಂದು ತಿಳಿದುಕೊಳ್ಳಲು ಪ್ರಯತ್ನಿಸುವುದು ಒಳ್ಳೆಯದು ಎಂದು ಬೌದ್ಧಧರ್ಮ ಬೋಧಿಸುತ್ತದೆ. ಇದಕ್ಕೆ ಕಾರಣ ಸ್ಪಷ್ಟ. ನಿರ್ವಾಣವನ್ನು ಶಬ್ದಗಳಿಂದ ವ್ಯಕ್ತಪಡಿಸುವುದು ಸಾಧ್ಯವಿಲ್ಲ.

೨. ನಿರ್ವಾಣವನ್ನು ಶಬ್ದಗಳಿಂದ ಏಕೆ ತಾನೇ ವ್ಯಕ್ತಪಡಿಸಲು ಆಗುವುದಿಲ್ಲ? ನಿರ್ವಾಣವನ್ನು ಅತ್ಯುನ್ನತ ಮಾನಸಿಕ ತರಬೇತಿ ಮತ್ತು ಪ್ರಬುದ್ಧ ಪ್ರಜ್ಞೆಯ ಮೂಲಕವಾಗಿ ಸಾಕ್ಷಾತ್ಕಾರ ಮಾಡಿಕೊಳ್ಳಬಹುದು. ಇದು ಯಾವುದೇ ಐಂದ್ರಿಯ ಅನುಭವ ವನ್ನು ಮೀರಿರುವಂಥದ್ದು. ಹೀಗಾಗಿ ಯಾವುದೇ ಲೌಕಿಕ ಭಾಷೆಯ ವಿವರಣೆಗೆ ಅದು ಒಳಪಡುವುದಿಲ್ಲ.

೩. ಬುದ್ಧ ತನ್ನ ಮೊಟ್ಟಮೊದಲ ಉಪದೇಶದಲ್ಲಿಯೇ ನಿರ್ವಾಣದ ಬಗ್ಗೆ ಹೀಗೆ ಹೇಳುತ್ತಾನೆ: "ಭಿಕ್ಷುಗಳೇ, ದುಃಖ ನಿರೋಧವೆಂಬ ಆರ್ಯಸತ್ಯವನ್ನು ಈ ಮುಂದಿನ ಶಬ್ದಗಳ ಮೂಲಕ ವಿವರಿಸಬಹುದು: ತೃಷ್ಣೆಯ ಸಂಪೂರ್ಣ ಉಪಶಮನ (ನಿರೋಧ), ಎಲ್ಲ ರೀತಿಯ ತೃಷ್ಣೆಯನ್ನು ಬಿಟ್ಟುಬಿಡುವುದು (ತ್ಯಾಗ), ತೃಷ್ಣೆಗೆ ಕಾರಣವಾಗುವ ಸಂಗತಿಗಳನ್ನು ತಿರಸ್ಕರಿಸುವುದು (ಪ್ರತಿನಿಸ್ಸಂಗ), ತೃಷ್ಣೆಯಿಂದ ಪೂರ್ಣ ಬಿಡುಗಡೆ (ಮುಕ್ತಿ) ಮತ್ತು ತೃಷ್ಣೆಯನ್ನು ಉಂಟುಮಾಡುವ ಸಂಗತಿಗಳಲ್ಲಿ ಪೂರ್ಣ ನಿರಾಸಕ್ತಿ (ಅನಾಲಯ)." ಮೇಲಿನ ಉಪದೇಶದಿಂದ ನಮಗೆ ಇಷ್ಟು ಗೊತ್ತಾಗುತ್ತದೆ : ದುಃಖದ ಉದಯವು ಉಂಟಾಗುವುದು ತೃಷ್ಣೆಯಿಂದ. ಯಾವಾಗ ಅದರ ಮೂಲ ಕಾರಣವಾದ ತೃಷ್ಣೆಯು ಶಮನವಾಗುವುದೋ, ಆಗ ದುಃಖವೂ ಉಪಶಮನಗೊಳ್ಳುವುದು. ನಿರೋಧ ಅಥವಾ ನಿರ್ವಾಣ ಎನ್ನುವುದು ತೃಷ್ಣೆಯ ಸಂಪೂರ್ಣ ಉಪಶಮನ ಸ್ಥಿತಿ.

೪. ನಿರ್ವಾಣವೆಂದರೆ ಬರಿಯ ಆತ್ಮದ ನಿರಾಕರಣವಾಗಲಿ ಅಥವಾ ವಿನಾಶವಾಗಲಿ ಅಲ್ಲ. ಅದೇ ರೀತಿ, ಅದು ಪರಿಪೂರ್ಣ ಶೂನ್ಯಸ್ಥಿತಿಯೂ ಅಲ್ಲ. ನಿರ್ವಾಣವೆಂದರೆ ಯಾವುದೇ ಭಾವವಸ್ತುವಿನ (positive) ಅಭಾವ; ಎಲ್ಲ ರೀತಿಯ ತೃಷ್ಣೆ ಯಿಂದ ಪೂರ್ಣ ಬಿಡುಗಡೆ. ನಾವು ಲೌಕಿಕ ಭಾಷೆಯಲ್ಲಿ ಉಪಯೋಗಿಸುವ ಯಾವುದೇ ಪರಿಕಲ್ಪನೆಯಾಗಲಿ, ಪದವಾಗಲಿ ಅಥವಾ ಚಿಂತನಾಲಹರಿಯಾಗಲಿ ನಿರ್ವಾಣಸ್ಥಿತಿಯನ್ನು ವಿವರಿಸಲು ಸಾಲದು. ಏಕೆಂದರೆ, ನಿರ್ವಾಣವೆನ್ನುವುದು ಸೃಷ್ಟಿಯಾದದ್ದಲ್ಲ, ಯಾವುದೇ ರೀತಿಯ ನಿಯಮಕ್ಕೆ ಒಳಪಟ್ಟಿ ದ್ದಲ್ಲ ಅಥವಾ ಬೇರಾವುದೋ ಮೂಲವಸ್ತುಗಳಿಂದ ಉಂಟಾದ ಸಂಯುಕ್ತ ಪದಾರ್ಥವೂ ಅಲ್ಲ.

೫. ನಿರ್ವಾಣದ ಸ್ಥಿತಿಯು ಭಾವ (ಇರುವಿಕೆ) ಮತ್ತು ಅಭಾವಗಳೆಂಬ(ಇಲ್ಲದಿರುವಿಕೆ) ಪರಿಕಲ್ಪನೆಗಳಿಗಿಂತಲೂ ಅತೀತವಾದದ್ದು. ಆಯಾ ಪರಿಸ್ಥಿತಿಗಳಿಗೆ ಮೀರಿನಿಂತದ್ದು; ಎಲ್ಲ ರೀತಿಯ ನಿರ್ಬಂಧಗಳಿಗೆ ಅತೀತವಾದದ್ದು. ಅದಕ್ಕೆಂದೇ ಬುದ್ಧನು ಭಿಕ್ಷುಗಳಿಗೆ ಹೀಗೆ ಹೇಳುತ್ತಾನೆ: "ಭಿಕ್ಷುಗಳೇ, ಆತ್ಯಂತಿಕ ಸತ್ಯಕ್ಕೆ ಇರುವ ಹೆಸರೇ 'ನಿರ್ವಾಣ' ಎಂದು. ಈ ಸಹಜ ತತ್ತ್ವಸ್ಥಿತಿಯಲ್ಲಿ ಎಲ್ಲ ರೀತಿಯ ತೃಷ್ಣೆಗಳೂ ನಾಶವಾಗುತ್ತವೆ."

**ನಿರ್ವಾಣ ಮಾರ್ಗ:** ಬೌದ್ಧಧರ್ಮದಲ್ಲಿನ ನಿರ್ವಾಣದ ಕಲ್ಪನೆ ಯನ್ನು ಅರ್ಥಮಾಡಿಕೊಳ್ಳಲು ಇದುವರೆಗೆ ಪ್ರಯತ್ನಿಸಿದೆವು. ಕಟ್ಟಕಡೆಯ ಆರ್ಯಸತ್ಯವು ಈ ನಿರ್ವಾಣದ ಹಾದಿಯನ್ನು, ಸಾಧನಾ ಮಾರ್ಗವನ್ನು ಉಪದೇಶಿಸುತ್ತದೆ. 'ಧರ್ಮ–ವಿನಯ' ಎಂಬುದೇ ಒಟ್ಟಾರೆ ಬೌದ್ಧ ಚಿಂತನೆಯ ತಿರುಳು. ಅದರಲ್ಲಿ ಧರ್ಮ ಎಂಬ ಪದವು ಬೌದ್ಧ ಸಿದ್ಧಾಂತವನ್ನೂ, ವಿನಯ ಎಂಬ ಪದವು ಅನುಷ್ಠಾನಮಾರ್ಗವನ್ನೂ ಸೂಚಿಸುತ್ತದೆ. ಬೌದ್ಧ ಸಾಹಿತ್ಯದಲ್ಲಿ ಕೇವಲ ತತ್ತ್ವಕ್ಕಿಂತ ಹೆಚ್ಚಾಗಿ ಆಚರಣಾ ವಿಧಾನಕ್ಕೇ ಹೆಚ್ಚು ಪ್ರಾಮುಖ್ಯತೆಯನ್ನು ನೀಡಲಾಗಿದೆ.

ಈ ಮಾರ್ಗವನ್ನು ಮೂರು ಶಿಸ್ತುಬದ್ಧ ಸಾಧನೆಗಳಾಗಿ ವಿಂಗಡಿಸಿಕೊಳ್ಳಬಹುದು: ೧. ಪ್ರಜ್ಞೆ ೨. ಶೀಲ ಮತ್ತು ೩. ಸಮಾಧಿ (ಏಕಾಗ್ರತೆ). ಇವುಗಳನ್ನು ಬಹಳ ಜಾಗರೂಕತೆಯಿಂದ ಆಚರಿಸಬೇಕು ಮತ್ತು ನಮ್ಮ ವ್ಯಕ್ತಿತ್ವದಲ್ಲಿ ಮೂಡಿಸಿಕೊಳ್ಳಬೇಕು. ಹೀಗೆ ಮಾಡಿದಾಗ, ಅವು ನಮ್ಮನ್ನು ಉನ್ನತವಾದ ಮಾನಸಿಕ ಸ್ತರಗಳಿಗೆ ಒಯ್ಯುತ್ತವೆ; ಅಂಧಕಾರದಿಂದ ಜ್ಞಾನದ ಬೆಳಕಿಗೂ, ಆವೇಗಗಳಿಂದ ನಿರಾಸಕ್ತ ಬುದ್ಧಿಯ ಕಡೆಗೂ ಮತ್ತು ಮಾನಸಿಕ ತುಮುಲಗಳಿಂದ ಪರಿಪೂರ್ಣ ಶಾಂತಸ್ಥಿತಿಗೂ ಕರೆದುಕೊಂಡು ಹೋಗುತ್ತವೆ.

"ಕೆಡುಕನ್ನು ಪರಿಹರಿಸಿಕೋ, ಒಳಿತನ್ನು ಬೆಳೆಸಿಕೋ, ನಿನ್ನ ಮನಸ್ಸನ್ನು ಪರಿಶುದ್ಧಗೊಳಿಸಿಕೋ" – ಇದೇ ಎಲ್ಲ ಧರ್ಮಗಳು ಬೋಧಿಸುವ ಚಿತ್ತಶುದ್ಧಿ ಹಾಗೂ ಮೋಕ್ಷಪ್ರಾಪ್ತಿಯ ರಾಜಮಾರ್ಗ. ಇದೇ ಬೌದ್ಧಧರ್ಮದ ಸಾಧನಾಮಾರ್ಗವೂ ಕೂಡ. ಇದನ್ನು ಅಷ್ಟಾಂಗಮಾರ್ಗವೆಂದೂ ಕರೆಯುತ್ತಾರೆ.

ಏಕೆಂದರೆ ಎಂಟು ಸಾಧನೆಗಳನ್ನು ಬಹುಮುಖ್ಯವಾಗಿ ಇಲ್ಲಿ ಬೋಧಿಸಲಾಗಿದೆ. ಅವುಗಳನ್ನು ಪ್ರಜ್ಞೆಯ ಸಾಧನೆಗಳು, ಶೀಲದ ಸಾಧನೆಗಳು ಮತ್ತು ಸಮಾಧಿಯ ಸಾಧನೆಗಳು ಎಂದು ಮೂರು ಗುಂಪುಗಳನ್ನಾಗಿ ಹೀಗೆ ವಿಂಗಡಿಸಬಹುದು:

| | | |
|---|---|---|
| ಸಮ್ಯಕ್ ದೃಷ್ಟಿ | : ಸರಿಯಾದ ಅರಿವು | 'ಪ್ರಜ್ಞೆ' |
| ಸಮ್ಯಕ್ ಸಂಕಲ್ಪ | : ಸರಿಯಾದ ಚಿಂತನೆ | |
| ಸಮ್ಯಕ್ ವಾಕ್ | : ಸರಿಯಾದ ಮಾತು | 'ಶೀಲ' |
| ಸಮ್ಯಕ್ ಕರ್ಮಾಂತ | : ಸರಿಯಾದ ಕರ್ಮ | |
| ಸಮ್ಯಕ್ ಆಜೀವ | : ಸರಿಯಾದ ಜೀವನ ನಿರ್ವಹಣೆ | |
| ಸಮ್ಯಕ್ ವ್ಯಾಯಾಮ | : ಸರಿಯಾದ ಪ್ರಯತ್ನ | 'ಸಮಾಧಿ' |
| ಸಮ್ಯಕ್ ಸ್ಮೃತಿ | : ಸರಿಯಾದ ಮನೋಭಾವ | |
| ಸಮ್ಯಕ್ ಸಮಾಧಿ | : ಸರಿಯಾದ ಏಕಾಗ್ರತೆ | |

ಈ ಮಾರ್ಗವನ್ನು **'ಮಧ್ಯಮ ಪಂಥ'** ಎಂದು ಬುದ್ಧ ಕರೆಯುತ್ತಾನೆ. ಏಕೆಂದರೆ ಈ ಸಾಧನೆಯಲ್ಲಿ ಎರಡು ಬಗೆಯ ಅತಿರೇಕಗಳಾಗುವುದನ್ನು ತಡೆಹಿಡಿಯಬೇಕು: ೧. ವಿಪರೀತ ಇಂದ್ರಿಯಲೋಲುಪತೆ; ಮತ್ತು ೨. ತೀವ್ರರೂಪದ ದೇಹದಂಡನೆ. ಇವೆರಡೂ ನಿರ್ವಾಣದ ಗಳಿಕೆಗೆ ಮಾರಕಗಳೆಂದು ಬುದ್ಧ ಹೇಳುತ್ತಾನೆ. ಬುದ್ಧನು ತನ್ನ ಅನುಭವದಿಂದಲೇ ಈ ಮಾತನ್ನು ಹೇಳುತ್ತಾನೆ ಎನ್ನುವುದು ಸ್ಪಷ್ಟ. ಆತನು ರಾಜಕುಮಾರನಾಗಿರುವ ಸಮಯದಲ್ಲಿ ಅತಿಯಾದ ಭೋಗದ ಮಧ್ಯೆ ಜೀವಿಸುತ್ತಿದ್ದನು. ಹಾಗೆಯೇ ತನ್ನ ಸಾಧನೆಯ ಮೊದಲ ದಿನಗಳಲ್ಲಿ ವಿಪರೀತ ದೇಹದಂಡನೆಯ ವಿಧಾನವನ್ನು ಅನುಸರಿಸುತ್ತಿದ್ದನು. ಇವೆರಡೂ ಸಾಧಕರನ್ನು ನಿರ್ವಾಣದ ಧ್ಯೇಯದಿಂದ ವಿಮುಖರನ್ನಾಗಿ ಮಾಡುತ್ತವೆಯೆಂದು ಬುದ್ಧನು ಚೆನ್ನಾಗಿ ಅರಿತಿದ್ದನು. ಹೀಗಾಗಿ ಅವನು ತನ್ನ ಅನುಯಾಯಿಗಳಿಗೆ, ಯಾವತ್ತೂ ಮಧ್ಯಮ ಪಂಥವನ್ನೇ ಅವನು ಬೋಧಿಸುತ್ತಾನೆ.

ಬುದ್ಧ ಬೋಧಿಸಿದ ಮಾರ್ಗವು ಅತ್ಯಂತ ಸುವ್ಯವಸ್ಥಿತವಾದುದು. ಇಲ್ಲಿ ಮಾರ್ಗವೆಂಬುದು ದುಃಖನಿವಾರಣೆಯ ಕ್ರಮದ ರಾಜಮಾರ್ಗವಾಗಿ ಪರಿಣಮಿಸುತ್ತದೆ. ಲೋಭ, ದ್ವೇಷ ಮತ್ತು ಮೋಹ – ಇವೇ ನಿರ್ವಾಣದ ಗಳಿಕೆಯ ಮಾರ್ಗದಲ್ಲಿ ಇರುವ ಮೂರು ಮೂಲಭೂತ ಅಡಚಣೆಗಳು. ಅವುಗಳನ್ನು ಸರಿಯಾದ ಚಾರಿತ್ರ್ಯ ಅಥವಾ ಶೀಲ, ಸರಿಯಾದ ಧ್ಯಾನ ಅಥವಾ ಏಕಾಗ್ರತೆ ಮತ್ತು ಸರಿಯಾದ ಪ್ರಜ್ಞೆ ಅಥವಾ ಅರಿವು – ಇವುಗಳಿಂದ ಪರಿಹರಿಸಿಕೊಳ್ಳುವುದೇ ಬೌದ್ಧ ಸಾಧನೆಯ ತಿರುಳು.

ಬುದ್ಧನ ಉಪದೇಶದಲ್ಲಿ ಮೂರು ಬಗೆಯ ಧ್ಯೇಯಗಳನ್ನು ಕಾಣುತ್ತೇವೆ:

೧. ಅತಿ ಶ್ರೇಷ್ಠವಾದ ಮನಃಶುದ್ಧಿ

೨. ಪರಿಪೂರ್ಣವಾದ ಮಾನಸಿಕ ಆರೋಗ್ಯ

೩. ಎಲ್ಲ ರೀತಿಯ ಮಾನಸಿಕ ಕಶ್ಮಲಗಳಿಂದ ಸಂಪೂರ್ಣ ಬಿಡುಗಡೆ.

ಈ ವಿಧಾನದಲ್ಲಿ, ಸಾಧಕನು ತನ್ನ ಉದ್ಧಾರವನ್ನು ತಾನೇ ಮಾಡಿಕೊಳ್ಳಬೇಕೆಂಬುದು ಬೌದ್ಧಧರ್ಮದ ನಿಲುವು. ಇದಕ್ಕಾಗಿ ದೇವರನ್ನೂ ಒಳಗೊಂಡು, ಯಾವುದೇ ಬಾಹ್ಯ ಪ್ರಭಾವದ ಅಗತ್ಯವನ್ನು ಅದು ತಳ್ಳಿಹಾಕುತ್ತದೆ.

ಈ ಮಾರ್ಗವನ್ನು ಸಂಕ್ಷಿಪ್ತವಾಗಿ ಹೀಗೆ ವಿವರಿಸಬಹುದು: ಶೀಲ ಅಥವಾ ಚಾರಿತ್ರ್ಯವನ್ನು ಬೆಳೆಸಿಕೊಳ್ಳುವುದು, ಏಕಾಗ್ರತೆಯ ಅಥವಾ ಧ್ಯಾನದ ಅಭ್ಯಾಸ ಮತ್ತು ಪ್ರಜ್ಞೆ ಅಥವಾ ಶ್ರೇಷ್ಠಮಟ್ಟದ ಅರಿವಿನ ಉದಯ. ಇದನ್ನು **ತ್ರಿವಿಧ ಶಿಕ್ಷಾ** ಎನ್ನುತ್ತಾರೆ. ಆದರೆ ಇವಾವುದೂ ಬೌದ್ಧಧರ್ಮದ ಆತ್ಯಂತಿಕ ಧ್ಯೇಯವಲ್ಲ. ಇವುಗಳಲ್ಲಿ ಪ್ರತಿಯೊಂದೂ ಕೇವಲ ಒಂದು ವಿಧಾನ ಅಥವಾ ಸಾಧನೆ ಮಾತ್ರ. ಅಲ್ಲದೆ, ಈ ಮೂರೂ ವಿಧಾನಗಳನ್ನು, ಯಾವುದೇ ಕಾಲಘಟ್ಟದಲ್ಲಿ, ಒಟ್ಟಾಗಿಯೇ ಆಚರಣೆಗೆ ತರಬೇಕು. ಏಕೆಂದರೆ, ಒಂದನ್ನು ಬಿಟ್ಟು ಇನ್ನೊಂದು ಫಲಕಾರಿಯಾಗಲು ಸಾಧ್ಯವೇ ಇಲ್ಲ. ಇದಕ್ಕಾಗಿ ಮೂರು ಕಾಲುಗಳ ಆಸನದ ಉದಾಹರಣೆಯನ್ನು ನೀಡಬಹುದು. ಯಾವುದೇ ಒಂದು ಕಾಲು ಇಲ್ಲದಿದ್ದರೂ, ಆಸನ ಬಿದ್ದುಹೋಗುತ್ತದೆ. ಹಾಗೆಯೇ **ಶೀಲ, ಏಕಾಗ್ರತೆ** ಮತ್ತು **ಅರಿವು** – ಈ ಮೂರೂ ಸಾಧಕನಲ್ಲಿ ಒಟ್ಟಾಗಿ, ಏಕಕಾಲದಲ್ಲಿ ಬೆಳೆಯುತ್ತ ಹೋಗಬೇಕು. ಏಕೆಂದರೆ ಒಂದು ಇನ್ನೊಂದರ ಗಳಿಕೆಗೆ ಪೂರಕವಾಗಿದೆ. ಶೀಲ ಅಥವಾ ನಿಯಂತ್ರಿತ ನಡವಳಿಕೆಯು ಧ್ಯಾನವನ್ನು ಶಕ್ತಿಭರಿತವನ್ನಾಗಿ ಮಾಡುತ್ತದೆ. ಹಾಗೆಯೇ ಧ್ಯಾನಾಭ್ಯಾಸವು ಅರಿವು ಅಥವಾ ಪ್ರಜ್ಞೆಯ ಉದಯದಲ್ಲಿ ಪ್ರೇರಕಶಕ್ತಿಯಾಗಿ ಕೆಲಸಮಾಡುತ್ತದೆ. ಪ್ರಜ್ಞೆಯಾದರೋ, ಬಾಹ್ಯ ಜಗತ್ತಿನ ವಿಷಯದಲ್ಲಿನ ಮೋಹ, ಭ್ರಮೆ ಅಥವಾ ಅಪರಿಪೂರ್ಣ ತಿಳಿವಳಿಕೆಯನ್ನು ದೂರ ಮಾಡುತ್ತದೆ; ಜೀವನವನ್ನು, ಅದು ಹೇಗೆ ಇದೆಯೋ ಹಾಗೆ ಪರಿಭಾವಿಸಲು ಸಹಾಯ ಮಾಡುತ್ತದೆ. ಜಗತ್ತು ಮತ್ತು ಬಾಳಿಗೆ ಸಂಬಂಧಪಟ್ಟದ್ದೆಲ್ಲವೂ ಉದಯ ಮತ್ತು ವಿನಾಶಗಳ ಚಕ್ರಕ್ಕೆ ಒಳಗಾಗುವಂಥವು ಎಂಬುದೇ ಅಂತಹ ವಾಸ್ತವಿಕ ದೃಷ್ಟಿ. ಈ ಸಾಧನಾವಿಧಾನದಲ್ಲಿ ಶೀಲವು ಪ್ರಜ್ಞೆಯನ್ನೂ, ಪ್ರಜ್ಞೆಯು ಶೀಲವನ್ನೂ ಪರಿಶುದ್ಧಗೊಳಿಸುತ್ತದೆ. ಇವೆರಡರ ಸಿದ್ಧಿಯಲ್ಲಿ ಏಕಾಗ್ರತೆಯು ಅತ್ಯವಶ್ಯಕವಾದ ಮಧ್ಯಾಂಗವಾಗಿ ಕಾರ್ಯವೆಸಗುತ್ತದೆ.

## ಉಪಸಂಹಾರ

ಹೀಗೆ ತತ್ತ್ವ (**ಧಮ್ಮ** ಅಥವಾ ಧರ್ಮ) ಮತ್ತು ಆಚರಣೆ (**ವಿನಯ**) – ಇವೆರಡರ ಸುಸಮಂಜಸ ಮತ್ತು ಸಾಮರಸ್ಯದ ಅಳವಡಿಕೆಯೇ ಬೌದ್ಧ ಜೀವನವಿಧಾನ. ಇವೆರಡೂ ವ್ಯಕ್ತಿಯೊಬ್ಬನ ಆಧ್ಯಾತ್ಮಿಕ ಉನ್ನತಿಗೆ ಕಾರಣವಾಗುತ್ತವೆ. ಸಾಧಕನು ತನ್ನ ಮಾತು, ಕೃತಿ ಮತ್ತು ಚಿಂತನೆಗಳನ್ನು ಉದಾತ್ತಗೊಳಿಸುವ, ಕಶ್ಮಲರಹಿತಗೊಳಿಸುವ ಉತ್ಕಟವಾದ ಸಾಧನೆಯೇ ಬುದ್ಧನು ಬೋಧಿಸುವ ರಾಜಮಾರ್ಗ. ಸ್ವಯಂ–ಅಭಿವೃದ್ಧಿ ಮತ್ತು ಸ್ವಯಂ–ಶುದ್ಧೀಕರಣಗಳೆಂಬ ಎರಡು ಮೂಲಭೂತ ಅಂಶಗಳನ್ನು ಇದು ಒಳಗೊಂಡಿದೆ. ಹೀಗಾಗಿ ಬೌದ್ಧಧರ್ಮದ ಧ್ಯೇಯವು ಬರಿಯ ತಾತ್ತ್ವಿಕ ಜಿಜ್ಞಾಸೆ ಅಥವಾ ಊಹಾಪೋಹಗಳಲ್ಲಿ ನೆಲೆಗೊಂಡಿಲ್ಲ, ಅದಕ್ಕೆ ಬದಲಾಗಿ ನೈಜ ಅನುಷ್ಠಾನದಿಂದ ಒದಗುವ ಆಧ್ಯಾತ್ಮಿಕ ಸಿದ್ಧಿಯಲ್ಲಿದೆ ಎನ್ನುವುದು ಸ್ಪಷ್ಟವಾಗುತ್ತದೆ.

(ಆಧಾರ: *The Buddha's Ancient Path* by Thera Piyadassi) ◆



ಸ್ವಾಮಿ ನಿತ್ಯಸ್ಥಾನಂದ

# ಅಭ್ಯಾಸ ಮತ್ತು ವೈರಾಗ್ಯ




(ಹಿಂದಿನ ಸಂಚಿಕೆಯಿಂದ ಮುಂದುವರಿದಿದೆ)

ಮನಸ್ಸನ್ನು ನಿಗ್ರಹಿಸುವುದಕ್ಕೆ ಇನ್ನೊಂದು ಮುಖ್ಯ ಉಪಾಯವೆಂದರೆ ವೈರಾಗ್ಯ. 'ವೈರಾಗ್ಯವಿಲ್ಲದ ಅಭ್ಯಾಸ' ಮತ್ತು 'ಅಭ್ಯಾಸವಿಲ್ಲದ ವೈರಾಗ್ಯ' ಎರಡೂ ಅಪಾಯಕಾರಿ. ಒಂದು ನದಿಗೆ ಅಣೆಕಟ್ಟನ್ನು ಕಟ್ಟುವುದು ವೈರಾಗ್ಯ. ಆದರೆ ಸಂಗ್ರಹವಾದ ನೀರನ್ನು ಬೇರೆ ಕಡೆ ಹರಿಸದಿದ್ದರೆ ಕಟ್ಟೆ ಒಡೆದುಹೋಗಬಹುದು. ಹಾಗೆಯೇ ವೈರಾಗ್ಯದ ಮೂಲಕ ಸಂಗ್ರಹವಾದ ಮನಶ್ಶಕ್ತಿಯನ್ನು ಅಭ್ಯಾಸದ ಮೂಲಕ ಭಗವನ್ಮುಖವಾಗಿ ಹರಿಸದಿದ್ದರೆ ವೈರಾಗ್ಯದ ಕಟ್ಟೆ ಒಡೆದುಹೋಗಬಹುದು; ಸಾಧಕನು ಮತ್ತೆ ಕಾಮಕ್ರೋಧಾದಿಗಳಿಗೆ ಬಲಿಯಾಗಬಹುದು. ಹಾಗೆಯೇ ವೈರಾಗ್ಯವಿಲ್ಲದೆ ಅಭ್ಯಾಸ ಮಾಡಿದರೆ, ಅಭ್ಯಾಸದ ಮೂಲಕ ಏಕಾಗ್ರಗೊಂಡ ಮನಶ್ಶಕ್ತಿಯು ಹೆಚ್ಚು ವೇಗಪೂರ್ಣವಾಗಿ ಕಾಮಕ್ರೋಧಾದಿಗಳ ಕಡೆ ಹರಿಯಬಹುದು. ತೀವ್ರ ತಪಸ್ಸನ್ನು ಮಾಡಿ ತಮ್ಮ ದುಷ್ಟಶಕ್ತಿಯನ್ನು ಹೆಚ್ಚಿಸಿಕೊಂಡ ಅನೇಕ ರಾಕ್ಷಸರ ಕಥೆಗಳು ನಮ್ಮ ಪುರಾಣದಲ್ಲಿ ಬರುತ್ತವೆ.

ರಾಕೆಟ್ ಭೂಮಿಯ ಆಕರ್ಷಣೆಯನ್ನು ಮೀರಿಹೋಗಬೇಕಾದರೆ ಬಹಳ ಶಕ್ತಿ ಬೇಕು. ಇದನ್ನು ಮೀರಿದ ಮೇಲೆ ಬೇರೆ ಗ್ರಹ ಅದನ್ನು ಎಳೆಯುತ್ತದೆ. ಹಾಗೆಯೇ ಪ್ರಾಪಂಚಿಕ ಆಕರ್ಷಣೆಗಳನ್ನು ಮೀರಿ ಹೋಗಬೇಕಾದರೆ ಅಪಾರ ಶಕ್ತಿ ಬೇಕು, ಹಾಗೂ ಆ ಶಕ್ತಿಯನ್ನು ತೀವ್ರ ವೈರಾಗ್ಯದ ಮೂಲಕ ಸಂಗ್ರಹಿಸಬೇಕು. ಮುಂದೆ ಭಗವಂತನೇ ಸಾಧಕನನ್ನು ಸೆಳೆಯುತ್ತಾನೆ.

ವೈರಾಗ್ಯದಲ್ಲಿಯೂ ಅನೇಕ ಹಂತಗಳಿವೆ. ಮೊದಲು ಇಂದ್ರಿಯ ವಿಷಯದಲ್ಲಿ ವೈರಾಗ್ಯವುಂಟಾಗುತ್ತದೆ. ಇಂದ್ರಿಯ ವಿಷಯಗಳ ಆಕರ್ಷಣೆ ಕಡಿಮೆಯಾದ ಮೇಲೆ ಹೆಸರು, ಕೀರ್ತಿಯ ಆಸೆ ಅಧಿಕವಾಗುತ್ತದೆ – ಕೀರ್ತಿಯ ಶನಿ ಹಿಡಿದುಕೊಳ್ಳುತ್ತದೆ. ಪ್ರಶಂಸೆ, ಸನ್ಮಾನ, ಸಾಮಾಜಿಕ ಪ್ರತಿಷ್ಠೆ ಇತ್ಯಾದಿಗಳು ವ್ಯಕ್ತಿಯನ್ನು ಆಕರ್ಷಿಸತೊಡಗುತ್ತವೆ. ಅನೇಕರನ್ನು, ಅವರಿಗೇ ತಿಳಿಯದ ರೀತಿಯಲ್ಲಿ ಕೀರ್ತಿ ಪ್ರತಿಷ್ಠೆಗಳ ಆಸೆಯು ವಿವಿಧ ಸತ್ಕಾರ್ಯಗಳಲ್ಲಿ, ಧಾರ್ಮಿಕ ಕಾರ್ಯಗಳಲ್ಲಿ ಸೇವಾಕಾರ್ಯಗಳಲ್ಲಿ ತೊಡಗಿಸುತ್ತದೆ. ಅವರು ಅದನ್ನು ತುಂಬ ಸಮರ್ಥವಾಗಿ ಸಮರ್ಥಿಸಿಕೊಳ್ಳಬಲ್ಲರು. ಯಾವ ಸೇವಾಕಾರ್ಯಗಳು ಅವರ ಪ್ರತಿಷ್ಠೆಯನ್ನು ಹೆಚ್ಚಿಸುವುದಿಲ್ಲವೊ, ಕೀರ್ತಿಯನ್ನು ಹೆಚ್ಚಿಸುವುದಿಲ್ಲವೊ, ಅವು ಎಷ್ಟೇ ಮುಖ್ಯವಾದರೂ, ಅಂತಹ ಸೇವಾಕಾರ್ಯಗಳಿಗೆ ಅವರು ಕೈಹಾಕುವುದಿಲ್ಲ. ಸ್ವಾಮಿ ವಿವೇಕಾನಂದರು ಹೇಳುತ್ತಾರೆ: "ನೂರರಲ್ಲಿ ತೊಂಬತ್ತು ಜನ ಸಾಧುಗಳು, ಕಾಮ ಕಾಂಚನವನ್ನು ತ್ಯಾಗ ಮಾಡಿದ ಮೇಲೂ, ಕೊನೆಯಲ್ಲಿ ಹೆಸರು ಕೀರ್ತಿಯ ಆಸೆಗೆ ಸಿಕ್ಕಿಹಾಕಿಕೊಳ್ಳುತ್ತಾರೆ. 'ಕೀರ್ತಿ . . . ಉದಾತ್ತ ಜೀವಿಯ ಕೊನೆಯ ದೌರ್ಬಲ್ಯ', ಎಂಬುದನ್ನು ಓದಿಲ್ಲವೇ?" ಕೀರ್ತಿಯ ಶನಿ ನಮ್ಮನ್ನು ಹೇಗೆ ಮೆಟ್ಟಿಕೊಳ್ಳುತ್ತದೆ ಎಂಬುದನ್ನು ಪ್ರಸಿದ್ಧ ಮನಶ್ಶಾಸ್ತ್ರಜ್ಞರಾದ ಎರಿಕ್ ಫ್ರೊಮ್ ಹೀಗೆ ಹೇಳುತ್ತಾರೆ: "ಜೀವನದ ಅರ್ಥವು ಸಂಶಯಾಸ್ಪದವಾದಾಗ, ತನ್ನೊಡನೆ ಮತ್ತು ಇತರರೊಡನೆ ಇರುವ ಸಂಬಂಧವು ರಕ್ಷಣೆ ನೀಡದಿದ್ದಾಗ, ವ್ಯಕ್ತಿಯ ಸಂಶಯವನ್ನು ಶಮನಗೊಳಿಸುವ ಒಂದು ಸಾಧನವೆಂದರೆ ಕೀರ್ತಿ."

ಇದನ್ನು ಮೀರಿದ ಇನ್ನೊಂದು ತ್ಯಾಗವಿದೆ: ಸ್ವ–ಇಚ್ಛಾತ್ಯಾಗ. ಎಲ್ಲ ಭಗವಂತನ ಇಚ್ಛೆ ಎಂದು ನಾವೆಷ್ಟೇ ಹೇಳಿದರೂ ನಮ್ಮಿಚ್ಛೆಯಂತೆಯೇ ಆಗಬೇಕೆಂದು ನಾವು ಬಯಸುತ್ತೇವೆ. ಅದಕ್ಕೆ ವಿರುದ್ಧವಾಗಿ ನಡೆದರೆ ಕೋಪ ನೆತ್ತಿಗೇರುತ್ತದೆ. 'ನನ್ನ ಇಚ್ಛೆಯಂತೆಯೇ ಆಗಬೇಕು, ನನ್ನ ಅಭಿಪ್ರಾಯವೇ ಸರಿ, ನನ್ನ ಸಲಹೆಯನ್ನೇ ಇತರರು ಸ್ವೀಕರಿಸಬೇಕು' – ಈ ರೀತಿ ನಮ್ಮ ಅಹಂಕಾರವನ್ನು ಸಮರ್ಥಿಸುತ್ತೇವೆ. ಅಹಂಕಾರತ್ಯಾಗವೇ ಅತ್ಯಂತ ದೊಡ್ಡ ತ್ಯಾಗ. ಈ ತ್ಯಾಗವಿಲ್ಲದೆ ಬೇರೆ ಎಲ್ಲ ತ್ಯಾಗವೂ ಆಧ್ಯಾತ್ಮಿಕವಾಗಿ ಅಷ್ಟು ಪ್ರಯೋಜನವಾಗುವುದಿಲ್ಲ. ಅದ್ದರಿಂದಲೇ ಶರಣಾಗತಿಯ ಭಾವವನ್ನು ನಾವು ಎಲ್ಲ ವಿಷಯಗಳಲ್ಲಿಯೂ ಬೆಳೆಸಿಕೊಳ್ಳಬೇಕು. 'ನಿನ್ನಿಚ್ಛೆಯಂತಾಗಲಿ' ಎಂಬ ಭಾವವಿರಬೇಕು. ಇದನ್ನು ಆಗಾಗ ಎಲ್ಲ ವಿಷಯದಲ್ಲಿಯೂ ಅನ್ವಯಿಸಬೇಕು – ಸುಮ್ಮನೆ ಬಾಯಲ್ಲಿ ಹೇಳುವುದಲ್ಲ. ನಮ್ಮ ಸಾಧನೆಯ ಹಿಂದೆಯೂ ಈ ಭಾವವಿರಬೇಕು.

ಯೋಗಶಾಸ್ತ್ರದ ಪ್ರಕಾರ ವೈರಾಗ್ಯದಲ್ಲಿ ನಾಲ್ಕು ಹಂತಗಳಿವೆ– **ಯತಮಾನ, ವ್ಯತಿರೇಕ, ಏಕೇಂದ್ರಿಯ, ವಶೀಕಾರ** ಮತ್ತು **ಪರ**. ಸಾಧನೆಯ ಪ್ರಾರಂಭದ ಹಂತದಲ್ಲಿ ಎಲ್ಲವೂ ಗೊಂದಲಮಯವಾಗಿರುತ್ತದೆ. ಆಸೆ ಮತ್ತು ಆದರ್ಶಗಳು ಮಿಶ್ರಗೊಂಡಿರುತ್ತವೆ. ಮನಸ್ಸು ಇವರೆಡರ ನಡುವೆ ಹೊಯ್ದಾಡುತ್ತಿರುತ್ತದೆ. ಒಂದು ಕಡೆ ಆಸೆಗಳ ಸೆಳೆತ, ಮತ್ತೊಂದು ಕಡೆ ಆದರ್ಶದ ಸೆಳೆತ – 'ಮನಸ್ಸೊಪ್ಪಿದರೂ

ದೇಹವೊಪ್ಪುವುದಿಲ್ಲ' ಎಂಬ ಪರಿಸ್ಥಿತಿ. ಇದು ಯತಮಾನ ವೈರಾಗ್ಯದ ಹಂತ – ಇದು ಯಾತನಾಮಯವೂ ಹೌದು. ಭಾಗವತದ ಒಂದು ಶ್ಲೋಕ ಇದನ್ನು ಸ್ಪಷ್ಟಪಡಿಸುತ್ತದೆ.

**ಯಶ್ಚ ಮೂಢತಮೋ ಲೋಕೇ ಯಶ್ಚ ಬುದ್ಧೇಃ ಪಾರಂಗತಃ।**
**ತಾವುಭೌ ಸುಖಮೇಧೇತೇ ಕ್ಲಿಶ್ಯತ್ಯಂತರಿತೋ ಜನಾಃ ॥**

"ಈ ಪ್ರಪಂಚದಲ್ಲಿ ಯಾರು ಅತ್ಯಂತ ಮೂಢನೊ ಮತ್ತು ಯಾರು ಬುದ್ಧಿಯನ್ನೂ ಮೀರಿ ಹೋಗಿರುವನೊ ಇವರಿಬ್ಬರೂ ಅತ್ಯಂತ ಸುಖವಾಗಿರುತ್ತಾರೆ. ಈ ಎರಡು ಅತಿರೇಕಗಳ ನಡುವೆ ಇರುವ ಜನರಿಗೆ ಮಾತ್ರ ಹೇಳತೀರದ ಸಂಕಟ."

ವ್ಯತಿರೇಕ ವೈರಾಗ್ಯದ ಹಂತದಲ್ಲಿ ಎಲ್ಲ ಸ್ಪಷ್ಟವಾಗಿ ಕಾಣ ತೊಡಗುತ್ತದೆ. ಯಾವ ಯಾವ ಆಸೆಗಳಿವೆ, ಯಾವ ಆಸೆಗಳು ಪ್ರಬಲವಾಗಿವೆ, ಯಾವ ಆಸೆಗಳು ದುರ್ಬಲ ವಾಗಿವೆ, ಮತ್ತು ಯಾವುದು ಆಧ್ಯಾತ್ಮಿಕ ಆದರ್ಶಕ್ಕೆ ಪೂರಕವಾದುದು – ಈ ಎಲ್ಲವೂ ಹೆಚ್ಚು ಸ್ಪಷ್ಟವಾಗಿ ಮನಸ್ಸಿಗೆ ಗೋಚರಿಸತೊಡಗುತ್ತವೆ. ಸಾಮಾನ್ಯವಾಗಿ ಒಂದು ರಾಷ್ಟ್ರದ ಸುತ್ತಲೂ ಅನೇಕ ಶತ್ರುರಾಷ್ಟ್ರಗಳು ಇರುತ್ತವೆ. ಅವುಗಳಲ್ಲಿ ಯಾವ ರಾಷ್ಟ್ರ ಪ್ರಬಲ, ಯಾವುದು ದುರ್ಬಲ, ಯಾವುದನ್ನು ಸಂಪೂರ್ಣ ಕಡೆಗಣಿಸಬಹುದು ಎಂಬುದನ್ನೆಲ್ಲ ಕರಾರುವಾಕ್ಕಾಗಿ ತಿಳಿದುಕೊಳ್ಳಬೇಕಾಗುತ್ತದೆ. ಹಾಗೆಯೆ ನಾವು ಹೋರಾಡಬೇಕಾದ ಆಸೆಗಳ ಬಲಾಬಲಗಳ ಸ್ಪಷ್ಟ ಅರಿವು ನಮಗಿರಬೇಕಾಗುತ್ತದೆ. ವೈರಾಗ್ಯದ ಮುಂದಿನ ಹಂತ ಏಕೇಂದ್ರಿಯ. ಈ ಹಂತದಲ್ಲಿ ಆಸೆಗಳ ಸೆಳೆತ ಕಡಿಮೆಯಾಗಿ ಒಮ್ಮನಸ್ಸಿನಿಂದ ಸಾಧನೆಯಲ್ಲಿ ಮುಂದುವರಿಯಲು ಸಾಧ್ಯವಾಗುತ್ತದೆ. ಇದು ಹಳ್ಳಿಯ ಕೆಟ್ಟ ರಸ್ತೆಯಲ್ಲಿ ವಾಹನವನ್ನು ಓಡಿಸುತ್ತ ರಾಷ್ಟ್ರೀಯ ಹೆದ್ದಾರಿಯನ್ನು ತಲುಪಿದಂತೆ. ಈ ಹಂತದಲ್ಲಿ ಮನಸ್ಸು ಹೆಚ್ಚು ಏಕಾಗ್ರಗೊಂಡಿರುತ್ತದೆ, ಸಾಧನೆಯಲ್ಲಿ ಹೆಚ್ಚು ತೃಪ್ತಿಯನ್ನು ಪಡೆಯುವಂತಾಗುತ್ತದೆ. ಆದರೆ ಸಂಸ್ಕಾರಗಳು ಇನ್ನೂ ಸಂಪೂರ್ಣ ನಾಶವಾಗಿರುವುದಿಲ್ಲ. ನಾವು ಎಚ್ಚರ ತಪ್ಪಿದರೆ ಮತ್ತೆ ಹಳೆಯ ಆಕರ್ಷಣೆಗಳ ಪ್ರಭಾವಕ್ಕೆ ಒಳಗಾಗಬಹುದು. ಭಯೋತ್ಪಾದಕರನ್ನು ನಿಗ್ರಹಿಸಿದರೂ ಕೆಲವರು ಎಲ್ಲೋ ಅವಿತುಕೊಂಡು ಮತ್ತೆ ಪ್ರಬಲರಾಗಿ ಮುತ್ತಿಗೆ ಹಾಕುವ ಸಂಭವವಿದೆ. ಆದ್ದರಿಂದ ಬಹಳ ಎಚ್ಚರಿಕೆಯಿಂದ ಇರಬೇಕಾಗುತ್ತದೆ, ಅತಿ ಭರವಸೆ ಸಲ್ಲದು.

ಮುಂದಿನ ಹಂತವಾದ ವಶೀಕಾರ ವೈರಾಗ್ಯದಲ್ಲಿ ಸಾಧಕನು ಆಸೆಗಳೆಲ್ಲವನ್ನೂ ಗೆದ್ದಿರುತ್ತಾನೆ. ಪತಂಜಲಿ ಮಹರ್ಷಿಗಳು ಈ ವೈರಾಗ್ಯದ ವಿವರಣೆಯನ್ನು ಹೀಗೆ ನೀಡುತ್ತಾರೆ:

**ದೃಷ್ಟ ಆನುಶ್ರವಿಕ ವಿಷಯವಿತೃಷ್ಣಸ್ಯ ವಶೀಕಾರಸಂಜ್ಞಾ ವೈರಾಗ್ಯಂ॥**

"ಇಹಪರ ಸುಖಗಳೆರಡರಲ್ಲಿಯೂ ತೃಷ್ಣಾರಹಿತನಾದವನಿಗೆ ವಶೀಕಾರವೆಂಬ ವೈರಾಗ್ಯವುಂಟಾಗುತ್ತದೆ." ಈ ಹಂತದಲ್ಲಿ ಸಂಸ್ಕಾರಗಳೂ ನಾಶವಾಗಿ ಕೇವಲ ಆಧ್ಯಾತ್ಮಿಕ ಪ್ರಜ್ಞಾಸಂಸ್ಕಾರ ಗಳು ಮಾತ್ರ ಉಳಿದಿರುತ್ತವೆ. ಇವುಗಳೂ ಬೇಡವಾದಾಗ ಆ ಸ್ಥಿತಿಯನ್ನು 'ಪರವೈರಾಗ್ಯ' ಎಂದು ಕರೆಯುತ್ತಾರೆ. ಆಗ ಆತ್ಮನ ಉಪಾಧಿಗಳೆಲ್ಲವೂ ಕಳಚಿ, ಆತನು ಪ್ರಕೃತಿಯಿಂದ ಸಂಪೂರ್ಣ ಬೇರೆಯಾಗಿ ಕೈವಲ್ಯ ಪದವಿಯನ್ನು ಪಡೆಯುತ್ತಾನೆ.

ಈ ವೈರಾಗ್ಯಶಕ್ತಿಯೊಂದಿಗೆ ಸುದೀರ್ಘ ಅಭ್ಯಾಸ ಮಾಡಲು ಅಪಾರ ತಾಳ್ಮೆ ಬೇಕು, ಶೀಘ್ರಫಲವನ್ನು ನಿರೀಕ್ಷಿಸಿದರೆ ನಡೆಯುವುದಿಲ್ಲ. ಆ ರೀತಿಯ ನಿರೀಕ್ಷೆಯೇ ಸಾಧನೆಗೆ ಅಡಚಣೆಯಾಗಬಹುದು. ಇಲ್ಲಿಯೂ ಶರಣಾಗತಿಯ ಭಾವ ಅತ್ಯಂತ ಮುಖ್ಯ – ನಮ್ಮ ಸಾಧನೆಯನ್ನು ಮಾಡಿ 'ಇನ್ನು ನಿನ್ನಿಚ್ಛೆ' ಎಂದು ಎಲ್ಲವನ್ನೂ ಭಗವಂತನಿಗೇ ಬಿಟ್ಟುಬಿಡುವುದು. ಒಂದು ಕಪಿಗೆ ತೋಟಗಾರಿಕೆಯಲ್ಲಿ ಇಚ್ಛೆ. ಅದು ಒಂದು ಕಡ್ಡಿಯನ್ನು ನೆಟ್ಟು ನೀರು ಗೊಬ್ಬರ ಹಾಕಿ ಪ್ರತಿದಿನ ಅದನ್ನು ಕಿತ್ತು ನೋಡುತ್ತದೆ. ಅದೇ ಬೇರು ಬಿಟ್ಟಿದೆಯೇ ಎಂದು. ನಮ್ಮ ಸಾಧನೆ ಕಪಿಯ ತೋಟಗಾರಿಕೆಯಂತೆ ಆಗಬಾರದು. ಆದ್ದರಿಂದ ತಾಳ್ಮೆ ಅತ್ಯಂತ ಮುಖ್ಯ. ಆಧ್ಯಾತ್ಮಿಕ ಸಾಧನೆಯೆಂಬುದು ಮ್ಯಾರಾಥಾನ್ ರೇಸ್ ಇದ್ದ ಹಾಗೆ, ನೂರು ಅಥವಾ ಇನ್ನೂರು ಮೀಟರ್ ಓಟದ ಸ್ಪರ್ಧೆಯಂತಲ್ಲ. ಮ್ಯಾರಾಥಾನ್ ರೇಸ್‌ನಲ್ಲಿ ಹದಿನೈದು ಅಥವಾ ಇಪ್ಪತ್ತು ಕಿಲೋಮೀಟರ್ ಓಡಬೇಕಾಗುತ್ತದೆ. ಓಡುವವರು ನಿಧಾನವಾಗಿ ಓಡುತ್ತಾರೆ, ನೂರು ಮೀಟರ್ ಸ್ಪರ್ಧೆಯಲ್ಲಿ ಓಡಿದಂತೆ ವೇಗವಾಗಿ ಓಡಿದರೆ ಬೇಗನೆ ಸುಸ್ತಾಗಿ ಕುಸಿದುಬೀಳುತ್ತಾರೆ, ಗುರಿಮುಟ್ಟಲಾಗುವುದಿಲ್ಲ. ಮ್ಯಾರಾಥಾನ್ ಸ್ಪರ್ಧೆಯಲ್ಲಿಯೂ ಅಷ್ಟೇ ಉತ್ಸಾಹವಿರುತ್ತದೆ. ಆದರೆ ತಾಳ್ಮೆಯಿಂದ ನಿಧಾನವಾಗಿ ಓಡುತ್ತಾರೆ. ಹಾಗೆಯೆ ಆಧ್ಯಾತ್ಮಿಕ ಸಾಧನೆಯಲ್ಲಿಯೂ ತಾಳ್ಮೆ ಮತ್ತು ಉತ್ಸಾಹ ಎರಡೂ ಬೇಕು. ಗಂಟುಬಿದ್ದ ದಾರವನ್ನು ತಾಳ್ಮೆಗೆಟ್ಟು ಬಿಡಿಸತೊಡಗಿದರೆ ಅದು ಮತ್ತಷ್ಟು ಗಂಟಾಗುತ್ತದೆ. ಹಾಗೆಯೇ ಆಧ್ಯಾತ್ಮಿಕ ಸಾಧನೆಯಲ್ಲಿಯೂ ತಾಳ್ಮೆ ಬೇಕು. ಗೌಡಪಾದಾಚಾರ್ಯರು ತಮ್ಮ ಮಾಂಡೂಕ್ಯ ಕಾರಿಕೆಗಳಲ್ಲಿ ಹೀಗೆ ಹೇಳುತ್ತಾರೆ:

**ಉತ್ಸೇಕ ಉದಧೇರ್ಯದ್ವತ್ ಕುಶಾಗ್ರೇಣೈಕಬಿಂದುನಾ ।**
**ಮನಸೋ ನಿಗ್ರಹಸ್ತದ್ವದ್ಭವೇದಪರಿಖೇದತಃ ॥೩.೪೧ ॥**

"ಸಮುದ್ರವನ್ನು ಕುಶಾಗ್ರದಿಂದ ಒಂದೊಂದು ಹನಿಯಾಗಿ ಖಾಲಿ ಮಾಡುವುದು ಹೇಗೋ ಹಾಗೆಯೇ ಮನೋನಿಗ್ರಹವೂ ತಾಳ್ಮೆಗೆಡದೆ ನಡೆಯಬೇಕು."

ಹೀಗೆ ತಾಳ್ಮೆಯಿಂದಲೂ, ವೈರಾಗ್ಯದಿಂದಲೂ ಅಭ್ಯಾಸ ಮಾಡುತ್ತ ಯೋಗಿಯು ಎಲ್ಲ ಕಲ್ಮಶಗಳಿಂದಲೂ ದೂರನಾಗಿ ಆತ್ಯಂತಿಕ ಆಧ್ಯಾತ್ಮಿಕ ಸುಖವನ್ನು ಅನುಭವಿಸುತ್ತಾನೆ. ಈ ಸುಖ ಅಪಾರವಾದುದು, ಇಂದ್ರಿಯಸುಖವನ್ನು ಮೀರಿದುದು ಮತ್ತು ಬುದ್ಧಿಗೆ ಮಾತ್ರ ಅರಿಯುವಂತಹದು. ಈ ಸುಖಕ್ಕಿಂತ ಅಧಿಕವಾದುದು ಮತ್ತೇನನ್ನೂ ಅವನು ಪರಿಗಣಿಸುವುದಿಲ್ಲ



ಮತ್ತು ಇದನ್ನು ಪಡೆದ ಮೇಲೆ ಎಂಥಾ ದುಃಖವೂ ಅವನನ್ನು ವಿಚಲಿತಗೊಳಿಸುವುದಿಲ್ಲ. (*ಗೀತಾ*, ೬ : ೨೧-೨೨)

ಪರಮಸುಖವನ್ನು ಪಡೆಯುವುದರ ಜೊತೆಗೆ ಯೋಗಿಯು ಸಮದರ್ಶಿಯೂ ಆಗುತ್ತಾನೆ. ಆಂತರಿಕ ಪರಿವರ್ತನೆಯೊಂದಿಗೆ ಬಾಹ್ಯ ಪರಿವರ್ತನೆಯೂ ಆಗುತ್ತದೆ. ಅವನು ಜಗತ್ತನ್ನು ನೋಡುವ ದೃಷ್ಟಿಯೇ ಬದಲಾಗುತ್ತದೆ. ಶ್ರೀಕೃಷ್ಣನು ಹೇಳುತ್ತಾನೆ :

**ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ ।**
**ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ ॥**
**(೬ : ೨೯)**

"ಯೋಗದಲ್ಲಿ ನೆಲೆನಿಂತವನು ಎಲ್ಲದರಲ್ಲಿಯೂ ಆತ್ಮನನ್ನೂ, ಆತ್ಮನಲ್ಲಿ ಎಲ್ಲವನ್ನೂ ನೋಡುತ್ತಾನೆ. ಅವನು ಎಲ್ಲೆಲ್ಲಿಯೂ ಸಮದರ್ಶಿಯಾಗುತ್ತಾನೆ."

ಸಮದರ್ಶನದಿಂದ ಪ್ರೀತಿ, ಸಹಾನುಭೂತಿ, ಸಹಬಾಳ್ವೆ, ಸಹಕಾರ ಇತ್ಯಾದಿ ಸದ್ಗುಣಗಳೆಲ್ಲ ಸ್ಫುರಿಸುತ್ತವೆ. ಈ ಸಮದರ್ಶಿತ್ವವು ಆತ್ಮದರ್ಶನದ ಮೂಲಕ ಅತ್ಯಂತ ಸ್ವಾಭಾವಿಕವಾಗುವುದು. ಆದರೆ ಇತರರು ಈ ಗುಣವನ್ನು ಪಡೆಯುವುದಕ್ಕೆ ಆತ್ಮದರ್ಶನವಾಗುವವರೆಗೆ ಕಾಯಬೇಕಾಗಿಲ್ಲ. ಪ್ರಯತ್ನಪೂರ್ವಕವಾಗಿಯೂ ಈ ಗುಣವನ್ನು ಬೆಳಸಿಕೊಳ್ಳ ಬಹುದು. ಅದಲ್ಲದೆ ಕೇವಲ ಭೇದದೃಷ್ಟಿಯನ್ನೇ ನಮ್ಮ ನಡವಳಿಕೆಯ ಆಧಾರವಾಗಿಟ್ಟುಕೊಂಡರೆ ರಾಗ, ದ್ವೇಷ, ಭಯ, ಸ್ವಾರ್ಥತೆ, ಯುದ್ಧ, ಹೈಜಾಕಿಂಗ್ ಎಲ್ಲ ಉಂಟಾಗುತ್ತದೆ. ಅನೇಕ ಸ್ವಕೇಂದ್ರಿತ ವ್ಯಕ್ತಿಗಳು, ತಾವು ಉತ್ತಮ ಸ್ಥಿತಿಯಲ್ಲಿದ್ದರೂ, ತಮಗೆ ಎಲ್ಲರಿಂದ ಅನ್ಯಾಯವಾಗುತ್ತಿದೆ ಎಂದು ಭಾವಿಸುತ್ತಾರೆ. ಇದೇ ರೀತಿ ಒಂದು ಜನಾಂಗವೇ ಭಾವಿಸಲು ತೊಡಗಿದರೆ ಯುದ್ಧ ಪ್ರಾರಂಭವಾಗುತ್ತದೆ.

ಸಮದರ್ಶಿಯಾದವನಿಗೆ ತನ್ನ ವಿಷಯದಲ್ಲಿ ಸುಖದುಃಖ ಗಳೆರಡೂ ಸಮಾನವಾಗುತ್ತವೆ. ಅವನ ಪಾಲಿಗೆ ಇವುಗಳೆಲ್ಲ ವಿವಿಧ ಬದಲಾವಣೆಗಳು ಅಷ್ಟೆ. ನಾವು ಒಂದು ಬಗೆಯ ಬದಲಾವಣೆಯನ್ನು 'ಸುಖ' ಎಂದು ಕರೆಯುತ್ತೇವೆ, ಇನ್ನೊಂದು ಬಗೆಯ ಬದಲಾವಣೆಯನ್ನು 'ದುಃಖ' ಎಂದು ಕರೆಯುತ್ತೇವೆ. ಯೋಗಿಯು ಮಾತ್ರ ಅದನ್ನು ಕೇವಲ 'ಬದಲಾವಣೆ'ಯಾಗಿ ಕಾಣುತ್ತಾನೆ, ಅವನಿಗೆ ಆ ಬದಲಾವಣೆಯ ಹಿಂದಿರುವ 'ಸತ್ಯ' ವೇ ಮುಖ್ಯ. ಪ್ರಕೃತಿಯಲ್ಲುಂಟಾಗುವ ವಿಶೇಷ ವ್ಯತ್ಯಯಗಳಲ್ಲಿ ಅನೇಕ ಜೀವಹಾನಿಯುಂಟಾದರೆ ಅದನ್ನು ಪ್ರಕೃತಿವಿಕೋಪ ಎಂದು ಕರೆಯುತ್ತೇವೆ. ಏನೂ ಆಗದಿದ್ದರೆ ಅದೊಂದು ಪ್ರಾಕೃತಿಕ ಬದಲಾವಣೆ ಅಷ್ಟೆ. ಜನವಸತಿಯ ಪ್ರದೇಶದಲ್ಲಿ ಭೂಕಂಪವುಂಟಾದರೆ ಅದೊಂದು ದೊಡ್ಡ ಅನಾಹುತ. ಅದೇ ನಿರ್ಜನ ಪ್ರದೇಶದಲ್ಲಾದರೆ ಅದೊಂದು ಸುದ್ದಿಯೇ ಆಗುವುದಿಲ್ಲ. ಇವೆಲ್ಲವೂ ಸಾಪೇಕ್ಷಿಕ.

ಗ್ರೀಸ್ ದೇಶದಲ್ಲಿ ಡಯೊನಿಸಸ್ ಎಂಬ ಒಬ್ಬ ಮಹಾಯೋಗಿ ಇದ್ದನು. ಅವನು ಎಲ್ಲವೂ ಕನಸು ಎಂದು ಹೇಳುತ್ತಿದ್ದನು. ಒಮ್ಮೆ ಅವನಿಗೆ ಯಾರೊ ಹೊಡೆದಿದ್ದರಿಂದ ಅವನ ಕಾಲು ನೋಯುತ್ತಿತ್ತು. ಬೇರೆಯವರು ಅವನನ್ನು ವಿಚಾರಿಸಿದರು, "ನೀವು ಎಲ್ಲವೂ ಕನಸು ಎಂದು ಹೇಳುತ್ತೀರಲ್ಲ, ಈಗ ಈ ನೋವಿನ ಬಗ್ಗೆ ಏನು ಹೇಳುತ್ತೀರಿ?" ಡಯೊನಿಸಸ್ ನಕ್ಕು ನುಡಿದನು: "ಹೌದು, ಇದೊಂದು ನೋವಿನ ಕನಸು."

ಶ್ರೇಷ್ಠ ಯೋಗಿಯ ಕುರಿತಾಗಿ ಶ್ರೀಕೃಷ್ಣನು ಹೀಗೆ ಹೇಳುತ್ತಾನೆ:

**ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ ।**
**ಸುಖಂ ವಾ ಯದಿ ವಾ ದುಃಖಂ ಸ ಯೋಗೀ ಪರಮೋ ಮತಃ ॥ (೬ : ೩೨)**

"ಎಲ್ಲೆಲ್ಲಿಯೂ ಸಮತ್ವವನ್ನು ಕಾಣುತ್ತ ಇತರರ ಸುಖದುಃಖ ಗಳನ್ನು ತನ್ನವೇ ಎಂದು ಯಾರು ಪರಿಗಣಿಸುತ್ತಾನೆಯೋ ಅವನೇ ಶ್ರೇಷ್ಠ ಯೋಗಿ ಎಂದು ಪರಿಗಣಿಸಲ್ಪಡುತ್ತಾನೆ."

ಒಬ್ಬ ವ್ಯಕ್ತಿಯು ತನ್ನನ್ನು ಪಡೆದಾಗ ಇಡೀ ಜಗತ್ತನ್ನು ಪಡೆದಂತಾಗುತ್ತದೆ. ಆಗ ಎಲ್ಲರೂ ಅವನ ಅಂಶವೇ ಆಗುತ್ತಾರೆ, ಇಡೀ ಜಗತ್ತು ಅವನ ವ್ಯಕ್ತಿತ್ವದ ಅಂಶವಾಗುತ್ತದೆ. ಇತರರಿಗೆ ಹಾನಿಯಾದರೆ ತನಗೇ ಹಾನಿಯಾದಂತೆ. ದೇಹವು ನಮ್ಮ ವ್ಯಕ್ತಿತ್ವದ ಅಂಗವಾಗಿರುವಂತೆ ಇಡೀ ಸಮಾಜವೂ ನಮ್ಮ ವ್ಯಕ್ತಿತ್ವದ ಅಂಗ, ಅದು ನಮ್ಮ ವ್ಯಕ್ತಿತ್ವದ ವಿಸ್ತರಣೆ. ನಮ್ಮ ದೇಹವನ್ನು ನಾವು ಪೋಷಿಸುವಂತೆ ಸಮಾಜವನ್ನೂ ಪೋಷಿಸಬೇಕು, ಅದು ಆರೋಗ್ಯವಾಗಿರುವಂತೆ ನೋಡಿಕೊಳ್ಳ ಬೇಕು. ಅದು ಭ್ರಷ್ಟವೂ ವಿಷಪೂರಿತವೂ ಆದರೆ ಆದರಿಂದ ನಮಗೇ ಹಾನಿ. ಈ ಮೇಲಿನ ಶ್ಲೋಕಕ್ಕೆ ಮಧುಸೂದನ ಸರಸ್ವತಿಗಳು ಹೀಗೆ ವ್ಯಾಖ್ಯಾನವನ್ನು ಬರೆಯುತ್ತಾರೆ: **ಸ್ವಸ್ಯ ಅನಿಷ್ಟಂ ಯಥಾ ನ ಸಂಪಾದಯತಿ, ಏವಂ ಪರಸ್ಯ ಅನಿಷ್ಟಂ ನ ಸಂಪಾದಯತಿ, ಪ್ರದ್ವೇಷಶೂನ್ಯತ್ವಾತ್। ಏವಂ ಸ್ವಸ್ಯ ಇಷ್ಟಂ ಯಥಾ ಸಂಪಾದಯತಿ, ತಥಾ ಪರಸ್ಯ ಇಷ್ಟಂ ಯಃ ಸಂಪಾದಯತಿ, ರಾಗಶೂನ್ಯತ್ವಾತ್ ॥** "ಹೇಗೆ ಅವನು ತನಗೆ ಅನಿಷ್ಟವಾದುದನ್ನು ಮಾಡುವುದಿಲ್ಲವೊ ಹಾಗೆಯೇ ಅವನು ಇತರರಿಗೂ ಅನಿಷ್ಟವನ್ನು ಉಂಟುಮಾಡುವುದಿಲ್ಲ. ಏಕೆಂದರೆ ಅವನಲ್ಲಿ ದ್ವೇಷಭಾವನೆ ಇರುವುದಿಲ್ಲ. ಅದೇ ರೀತಿ ಅವನು ತನಗೆ ಇಷ್ಟವಾದುದನ್ನು ಮಾಡುವಂತೆಯೇ ಇತರರಿಗೂ ಇಷ್ಟವಾದುದನ್ನೇ ಮಾಡುತ್ತಾನೆ. ಏಕೆಂದರೆ ಅವನಲ್ಲಿ ರಾಗವಿರುವುದಿಲ್ಲ."

ಹೀಗೆ ಅಭ್ಯಾಸವೈರಾಗ್ಯಗಳಿಂದ ವ್ಯಕ್ತಿಯು ತನ್ನ ವೈಯಕ್ತಿಕ ಪರಿಧಿಯನ್ನು ಮೀರಿ ಆಧ್ಯಾತ್ಮಿಕ ಉನ್ನತಿಯನ್ನೂ ಸಾಮಾಜಿಕ ವಿಸ್ತರಣೆಯನ್ನೂ ಪಡೆಯುತ್ತಾನೆ. ಇದು ಸ್ವಾಮಿ ವಿವೇಕಾನಂದರ **'ಆತ್ಮನೋ ಮೋಕ್ಷಾರ್ಥಂ ಜಗದ್ಧಿತಾಯ ಚ'** ಎಂಬ ಆದರ್ಶವನ್ನೇ ಸೂಚಿಸುತ್ತದೆ. ◆

# ದೇವಾನಾಂಪ್ರಿಯ – ಭಕ್ತಾಗ್ರಣಿ

(ಕನ್ನಡ ಶ್ಲೋಕರೂಪೀ ಭಗವದ್ಗೀತೆ–೧೨ನೇ ಅಧ್ಯಾಯ)

**ವಿಜಯನಾಥ ಭಟ್ಟ, 'ಕೌಂಡಿನ್ಯ'**

ಲೋಕೋತ್ತರ ಕೃತಿಯಾದ ಭಗವದ್ಗೀತೆಯನ್ನು ಸಂಪೂರ್ಣವಾಗಿ ಕನ್ನಡದಲ್ಲಿ ಪದ್ಯರೂಪದಲ್ಲಿ ಅನುವಾದಿಸಿ, 'ವಿಜಯಿನಿ' ಎಂಬ ಹೆಸರಿನಲ್ಲಿ ಪ್ರಕಟಿಸಿದವರು ಶ್ರೀ ವಿಜಯನಾಥ ಭಟ್ಟರು. ರಾಷ್ಟ್ರೀಕೃತ ಬ್ಯಾಂಕಿಂಗ್ ಸಂಸ್ಥೆಯೊಂದರ ಉಚ್ಚ ಅಧಿಕಾರಿಯಾಗಿದ್ದು ಈಗ ನಿವೃತ್ತರಾಗಿರುವ ಶ್ರೀಯುತರು ಕನ್ನಡ, ಇಂಗ್ಲಿಷ್ ಎರಡೂ ಭಾಷೆಗಳಲ್ಲಿ, ಗದ್ಯ ಪದ್ಯ ಎರಡೂ ಪ್ರಕಾರಗಳಲ್ಲಿ ಪರಿಣತರು.

ಶ್ರೀಮದ್ಭಗವದ್ಗೀತೆ ಅನಂತಮುಖಿ. ನಾವು ಯಾವ ನಿಟ್ಟಿನಲ್ಲಿ ನೋಡಿದರೂ ಅದು ಆ ನಿಟ್ಟಿನಲ್ಲಿ ತೆರೆದುಕೊಳ್ಳುತ್ತದೆ. ಗೀತಾಚಾರ್ಯನ ಕೌಶಲ, ಪರಿ ಅಂತಹದು. ನಾವು ಹೆಚ್ಚು ಹೆಚ್ಚು ಓದಿದಷ್ಟೂ ಅದು ನಮಗೆ ಹೆಚ್ಚು ಹೆಚ್ಚಾಗಿ ಅರ್ಥವಾಗುತ್ತದೆ. ಪ್ರತಿ ಬಾರಿಯೂ ಹೊಸ ಹೊಸ ಆಯಾಮಗಳು ನಮ್ಮ ಮುಂದೆ ತೆರೆದು ನಿಲ್ಲುತ್ತವೆ.

'ಗೀತೆ' – ಜ್ಞಾನ, ಕರ್ಮ, ಭಕ್ತಿ, ರಾಜಯೋಗ ಇವೆಲ್ಲವನ್ನೂ ಸಮರಸಗೊಳಿಸಿ ನಮಗೆ ದಿವ್ಯಪಾಕವನ್ನು ಉಣಬಡಿಸುವ ಒಂದು 'ಸಮನ್ವಯ ಗ್ರಂಥ'. ಮುಕ್ತಿಯನ್ನರಸುವವರಿಗೆ ಅವರವರದೇ ದಾರಿಯನ್ನು ಅದು ತೋರಿಸಿಕೊಡುತ್ತದೆ. ಒಂದೊಮ್ಮೆ ಅದು 'ಕರ್ಮಯೋಗ'ದ ಮಹಿಮೆಯನ್ನು ಕೊಂಡಾಡಿದರೆ, ಅದರ ಬೆನ್ನಲ್ಲೇ ಅದು ಸಾಂಖ್ಯರಿಗೆ (ಜ್ಞಾನಿಗಳಿಗೆ) 'ಜ್ಞಾನಯೋಗ'ವೇ ಯೋಗ್ಯವೆಂದು ಶ್ಲಾಘಿಸುತ್ತದೆ. ಆದರೆ ಶ್ರೀಸಾಮಾನ್ಯರಿಗೆ ಸುಲಭವಾದ ಮಾರ್ಗ 'ಭಕ್ತಿಯೋಗ'ವೆಂದೂ ಅದು ಸಾರುತ್ತದೆ. 'ಕರ್ಮಯೋಗ'ದ ತಿರುಳು ಫಲತ್ಯಾಗದ ಮನೋಧರ್ಮ ಮತ್ತು ಸರ್ವಸಮರ್ಪಣಾಭಾವಗಳೇ ಎಂದು ವಾದಿಸುತ್ತಲಿದ್ದರೆ, ಅದು 'ಭಕ್ತಿಯೋಗ'ದ ನಾಂದಿಯೂ ಹೌದು ಎಂದು ಪ್ರತಿಪಾದಿಸುತ್ತದೆ.

ಅಷ್ಟಾದಶಾಧ್ಯಾಯೀ ಗೀತೆಯಲ್ಲಿ 'ಭಕ್ತಿಯೋಗ'ವೆಂದೇ ಶಿರೋನಾಮೆಯನ್ನು ಧರಿಸಿದ ಹನ್ನೆರಡನೆಯ ಅಧ್ಯಾಯ ಗಾತ್ರದಲ್ಲಿ ಉಳಿದೆಲ್ಲ ಅಧ್ಯಾಯಗಳಿಗಿಂತಲೂ ಕಿರಿದು – ಕೇವಲ ಇಪ್ಪತ್ತು ಶ್ಲೋಕಗಳು. ಆದರೆ ಅವುಗಳಲ್ಲಿನ ಒಂದೊಂದು ಶ್ಲೋಕವೂ ಮಾಣಿಕ್ಯ. ಯಾವುದೇ ಒಂದು ಮಾರ್ಗವನ್ನಾದರೂ ಜೀವನು ಶ್ರದ್ಧೆಯಿಂದ, ಪ್ರೀತಿಯಿಂದ, ತಕ್ಕುದಾದ ಶರೀರ ಮನಸ್ಸು ಬುದ್ಧಿಗಳನ್ನು ಸಾಧನೆಗಳಿಂದ ಹದ ಮಾಡಿಕೊಂಡು ಶ್ರಮಿಸಿದರೆ ಅದು ಸಾಧಕನಿಗೆ ಸುಲಭವೂ, ಪರಮಾತ್ಮನಿಗೆ ಪ್ರಿಯವೂ ಆಗುವುದೆಂದು ನಿರ್ದಿಷ್ಟವಾಗಿ, ನಿರ್ದುಷ್ಟವಾಗಿ ಅವು ತಿಳಿಹೇಳುತ್ತವೆ.

ಈ ಹನ್ನೆರಡನೆಯ ಅಧ್ಯಾಯವನ್ನು ಒಳಹೊಗುವ ಮೊದಲು ಹನ್ನೊಂದನೆಯ ಅಧ್ಯಾಯದ ಅಂತದಲ್ಲಿಯೇ, ಶ್ರೀಕೃಷ್ಣ ಇದರ ನಿಚ್ಚಳ ಸುಳಿವನ್ನು ಕೊಡುತ್ತಾನೆ. ದೇವಾದಿ ದೇವತೆಗಳಿಗೂ ಕಾಣಸಿಗಲಸದಳವಾದ ತನ್ನ ವಿಶ್ವರೂಪವನ್ನು ಪ್ರಯಾಸದಿಂದ ನೋಡಿ ಬೆಚ್ಚಿ, ಬೆದರಿ, ಬೆರಗಾದ ಅರ್ಜುನನಿಗೆ ಶ್ರೀಕೃಷ್ಣ ಸ್ಪಷ್ಟವಾಗಿ ವಿವರಿಸುತ್ತಾನೆ :

**ಕಾಣಲಿದನಳವಲ್ಲ, ಈ ನನ್ನ ಬಹುರೂಪ**
**ನೀ ನೋಡಿದೊಲು, ಪಾರ್ಥ, ನೀನೆ ಅತಿ ಧನ್ಯ !**
**ದೇವಾದಿ ದೇವರುಗಳನುಗಾಲ ಕಾಯುವರು**
**ನೋಡಲಿಂತೆನ್ನನ್ನು ಭಜಿಸುತಲನನ್ಯ ॥ (೧೧ : ೫೨)**

**ವೇದ ಓದಿದರೇನು? ತಪ ದಾನ ಯಜ್ಞಗಳ**
**ಬಿಡದೆ ಮಾಡಿದರೇನು? ಸಿಗಲಾರೆ ನಾನು ।**
**ನಿನಗೆ ಸಿಕ್ಕೊಲು, ಅನ್ಯರಿಗೆ ದೃಷ್ಟಿಗೋಚರಕೆ**
**ಯಾವ ಪರಿಯಲು ಕಠಿಣ ಶ್ರಮಪಟ್ಟರೇನು? ॥ (೧೧ : ೫೩)**

**ನನಗಾಗಿ ಮಾಡುವನು, ನನ್ನ ತಡಕಾಡುವನು,**
**ಅನವರತ ವಿಷಯಗಳಾಸಕ್ತಿಯನು ತ್ಯಜಿಸಿ ।**
**ಜೀವರಾಶಿಗಳಲ್ಲಿ ಹಗೆಯ ತಾಳದ ನರನು**
**ನನ್ನೊಳೊಂದಾಗುವನು, ಅನುದಿನವು ಭಜಿಸಿ ॥ (೧೧ : ೫೫)**

ಇಷ್ಟು ಸ್ಪಷ್ಟವಾಗಿ ಶ್ರೀಕೃಷ್ಣ ತಿಳಿ ಹೇಳಿದರೂ ಅರ್ಜುನನ ದ್ವಂದ್ವ ಇನ್ನೂ ದೂರವಾಗಿಲ್ಲ. ಸಾಕಾರ, ಸಗುಣ ಪರಮಾತ್ಮನನ್ನು ನಿಷ್ಠೆಯಿಂದ ಪೂಜಿಸುವವರು ಮತ್ತು ನಿರಾಕಾರ ನಿರ್ಗುಣಬ್ರಹ್ಮನನ್ನು ಪರಮತತ್ತ್ವವೆಂದು ಆರಾಧಿಸುವವರು– ಇವರೀರ್ವರಲ್ಲಿ ಯಾರು (ಯಾವ ಮಾರ್ಗ) ಉತ್ತಮರೆಂದು ಆತನಿಗೆ ಇನ್ನೂ ಬಗೆಹರಿಯದ ಪ್ರಶ್ನೆ. ಈ ಪ್ರಶ್ನೆಯಿಂದಲೇ ಹನ್ನೆರಡನೆಯ ಅಧ್ಯಾಯ ಭಕ್ತಿಯೋಗ ತೊಡಗುತ್ತದೆ :

**ಓರ್ವನನವರತ ಸಾಧನೆಯಿಂದ ಭಕ್ತಿಮಾ–**
**ರ್ಗವ ಹಿಡಿದು ನಡೆದು ಬರುತಿಹ ನಿನ್ನ ಬಳಿಗೆ ।**
**ಮತ್ತೋರ್ವನರ್ಚಿಪನು ಅವ್ಯಕ್ತ ತತ್ತ್ವವನೆ**
**ಯೋಗವಿತ್ತಮರಾರು, ಈ ಈರ್ವರೊಳಗೆ ? ॥ (೧೨ : ೧)**

ಮುಂದಿನ ಶ್ಲೋಕದಲ್ಲಿ ಶ್ರೀಕೃಷ್ಣ ಸ್ಪಷ್ಟವಾಗಿ ಉತ್ತರಿಸುತ್ತಾನೆ– ನಿಸ್ಸಂದೇಹವಾಗಿ, ಸಾಕಾರ, ಸಗುಣ ಪರಮಾತ್ಮನ ಆರಾಧಕನೆ ಅತ್ಯುತ್ತಮ ಯೋಗಿ :

ಮನಮಂದಿರದಲಿ ನನ್ನದೇ ಬಿಂಬ ಕೋರಿಟ್ಟು
ವಿಧವಿಧದಿ ನನ್ನ ಪೂಜಿಸುತಲಿರೆ ನಿತ್ಯ ।
ತುಂಬು ನಂಬುಗೆಯಿಂದ ಸೇವಿಸುವ ಸಾಧಕನೆ
ಲೋಕದೊಳಗುತ್ತಮನು ಎಂಬುದೇ ಸತ್ಯ ॥ (೧೨ : ೨)

ನಂತರ ಬರುವ ಮೂರನೇ ಮತ್ತು ನಾಲ್ಕನೇ ಶ್ಲೋಕಗಳಲ್ಲಿ ನಿರಾಕಾರ, ನಿರ್ಗುಣ ಬ್ರಹ್ಮತತ್ತ್ವದ ವಿವರಣೆಯಿದ್ದು, ಅಂತಹ ಏಕಮೇವಾದ್ವಿತೀಯ ತತ್ತ್ವದ ಆರಾಧನೆಯೂ ಪರಮಾತ್ಮ ಸಾಕ್ಷಾತ್ಕಾರವನ್ನು ಕೊಡಿಸಬಲ್ಲದು ಎನ್ನುತ್ತಾನೆ ಶ್ರೀಕೃಷ್ಣ :

ಅವ್ಯಕ್ತ ತತ್ತ್ವವೂ ಸರ್ವತ್ರ ಅವಿನಾಶಿ
ಚಿಂತನೆಗೆ ಹೊರತು ಅದು, ಅಭಿವ್ಯಕ್ತಿ ಬಲೆಗೆ ।
ಸಿಲುಕದದು, ವ್ಯಾಪಿಸಿದೆ ಭೂವ್ಯೋಮದುದ್ದಗಲ
ಭವ್ಯವದು, ತುಯ್ಯಲಾರದು ಕಾಲದಲೆಗೆ ॥ (೧೨ : ೩)

ಪಂಚೇಂದ್ರಿಯಂಗಳಿಗೆ ತೊಡಿಸಿ ಕಡಿವಾಣ ಸಮ-
ದೃಷ್ಟಿ ಹರಿಸುತ ಎಲ್ಲ ದಶದಿಕ್ಕುಗಳಿಗೆ ।
ಜೀವರಾಶಿಗಳೊಳಿತು ಸರ್ವದಾ ಬಯಸುವವ –
ನಂತದಲಿ ಬಂದು ಸೇರುವ ನನ್ನ ಬಳಿಗೆ ॥ (೧೨ : ೪)

ಐದನೇ ಶ್ಲೋಕದಲ್ಲಿ ಭವದೇಹಿಗೆ ಅವ್ಯಕ್ತ ತತ್ತ್ವದ ಪರಿಕಲ್ಪನೆ ಮತ್ತು ಪೋಷಣೆ ಎಷ್ಟು ಕಷ್ಟಕರವಾದುದೆಂದು ವಿವರಿಸಲಾಗಿದೆ :

ಅವ್ಯಕ್ತ ತತ್ತ್ವದರ್ಚನೆಯ ನೆಚ್ಚುವ ಮಂದಿ-
ಗಹುದಧಿಕತರ ದಣಿವು, ನೂರಾರು ಬಾರಿ ।
ಸಾಧಕರ ಪಾಳಿ ಉಣಲುಂಟು ದಂಡನೆ, ನೋವು,
ಬಿಡುಗಡೆಯ ಈ ಮಾರ್ಗ ಬಲು ಬಳಸುದಾರಿ ॥ (೧೨ : ೫)

ಬಳಿಕದ ಆರನೇ ಮತ್ತು ಏಳನೇ ಶ್ಲೋಕದಲ್ಲಿ ಶ್ರೀಕೃಷ್ಣ, 'ಯಾರು ತನ್ನೆಲ್ಲ ಕರ್ಮಗಳನ್ನು ಪರತತ್ತ್ವಕ್ಕೆ ಮುಡಿಪಾಗಿಟ್ಟು, ಅವಿರತವಾಗಿ ಮತ್ತು ಏಕಾಗ್ರತೆಯಿಂದ ನನ್ನನ್ನೇ ಧ್ಯಾನಿಸುತ್ತಾರೋ ಅಂತಹವರ ರಕ್ಷಣೆಗೆ ನಾನು ಯಾವತ್ತೂ ಬದ್ಧನಾಗಿರುವೆ' ನೆಂದು ಭರವಸೆ ಕೊಡುತ್ತಾನೆ :

ಮಂದಿಯಿಹರೊಂದು ಬಗೆ – ಸರ್ವಕರ್ಮಗಳನ್ನು
ನನ್ನಡಿಗೆ ಮುಡಿಪಾಗಿ ಕೊಟ್ಟು ಕೊಂಬುವರು ।
ಕಾಣರವರನ್ಯರನು, ನನ್ನೋರ್ವನನೆ ಯೋಗ
ಸಾಧನೆಯ ಗುರಿಯಾಗಿ ಇಟ್ಟುಕೊಂಬುವರು ॥ (೧೨ : ೬ )

ನನ್ನ ನೆಚ್ಚಿದ ಭಕ್ತ ದಿವ್ಯಚೇತಸರಾರು
ಭವಸಾಗರದಿ ಸದಾ ಕೊರಗಬೇಕಿಲ್ಲ ।
ಪಾರ್ಥ, ಕೇಳೆನ್ನದಿದು ಬಾಸೆ, ಅವರೆಂದಿಗೂ
ಹುಟ್ಟು ಸಾವಿನ ನಡುವೆ ಕರಗಬೇಕಿಲ್ಲ ॥ (೧೨ : ೭)

ಶ್ರೀಕೃಷ್ಣನು ಮುಂದುವರಿದು, ಎಂಟನೇ ಶ್ಲೋಕದಲ್ಲಿ, ಅವರು ತಂತಮ್ಮ ಮನೋಬುದ್ಧಿಗಳನ್ನು ಪರಮಾತ್ಮನಲ್ಲಿ ಸಂಪೂರ್ಣವಾಗಿ ತೊಡಗಿಸಿರುವಂತೆ ಸೂಚಿಸುತ್ತಾನೆ :

ತಳವೂರಿ ನಿಲಲೆನ್ನ ಧ್ಯಾನದಲಿ ನಿನ್ನ ಮನ
ತಿಳಿವನ್ನು ಚಿರವಾಗಿ ಎನ್ನಲ್ಲೆ ನಿಲಿಸು ।
ಫಲವಾಗಿ ಮೇಲೇರಿ ಬರುವೆ, ನಿಸ್ಸಂದೇಹ,
ಎಂದೆಂದು ಕೊನೆಯಿರದೆ ನನ್ನಲ್ಲೆ ನೆಲೆಸು ॥ (೧೨ : ೮)

ತದನಂತರ ಬರುವ ಮೂರು ಶ್ಲೋಕಗಳಲ್ಲಿ ಶ್ರೀಕೃಷ್ಣ, ಅರ್ಜುನನಿಗೆ ಪ್ರಯತ್ನಪಟ್ಟು ತನ್ನ ಮನಸ್ಸನ್ನು ಸದಾ ಪರಮಾತ್ಮನಲ್ಲಿಯೇ ಏಕಾಗ್ರಗೊಳಿಸುವಂತೆಯೂ, ಅದು ಅಸಾಧ್ಯವಾದರೆ, ಕನಿಷ್ಠ ಪಕ್ಷ, ತಾನು ಮಾಡುವ ಎಲ್ಲಾ ಕರ್ಮಗಳನ್ನು ಪರಮಾತ್ಮನಿಗಾಗಿಯೇ ಮಾಡುವಂತೆಯೂ, ಅದೂ ಸಾಧ್ಯವಿಲ್ಲದಿದ್ದರೆ ತಾನು ಮಾಡುವ ಎಲ್ಲಾ ಕರ್ಮಗಳ ಫಲಗಳನ್ನೂ ಪರಮಾತ್ಮನಿಗೇ ಸಂಪೂರ್ಣ ಸಮರ್ಪಿಸುವಂತೆಯೂ ಸಲಹೆ ನೀಡುತ್ತಾನೆ :

ಒಂದೊಮ್ಮೆ ಎನ್ನಲ್ಲಿ ಹರಿಯದಿರೆ ಕಪಿಮನಸು
ಅಭ್ಯಸಿಸುತಿರು ಹಗಲಿರುಳು ಮರಳಿ ಮರಳಿ ।
ಹೊರತೋಟ ಬದಿಗಿಟ್ಟು, ಒಳದನಿಗೆ ಓಗೊಡಲು
ಸಾಫಲ್ಯವನು ಸಾಧಿಸುವೆ ಚಿತ್ತವರಳಿ ॥ (೧೨ : ೯)

ಎಟುಕಲಾರದೆ ನಿನಗೆ ಚಿತ್ತವೃತ್ತಿ ನಿರೋಧ?
ನೀನು ಮಾಡುವುದೆಲ್ಲ ನನಗಾಗೆ ಇರಲಿ ।
ನನ್ನನರ್ಚಿಸಲೆಂದೆ ಕಜ್ಜಗಳ ಮಾಡುವೊಡೆ,
ನೀ ಪಡೆವೆ ಸಿದ್ಧಿ, ನಿನಗೀಯರಿವು ಬರಲಿ ॥ (೧೨ : ೧೦)

ಇನಿತನ್ನು ಮಾಡುವುದು ನಿನಗಾಗದಿರೆ, ನನ್ನ
ಅರಿವನ್ನು ಕೊಡುವ ಯೋಗದ ದಾರಿ ಹಿಡಿದು ।
ಮನಸ್ಸು ಬುದ್ಧಿಗಳನ್ನು ಅದುಮಿಟ್ಟು ಕೊನೆಯಲ್ಲಿ
ಬಿಟ್ಟುಬಿಡು ಕರ್ಮಗಳ, ಫಲದಾಸೆ ತೊಡೆದು ॥ (೧೨ : ೧೧)

ಹನ್ನೆರಡನೆಯ ಶ್ಲೋಕದಲ್ಲಿ, ಪರಮಾತ್ಮನು ಇತರ ಬಳಸುದಾರಿಗಳಿಗಿಂತ ನಿಷ್ಕಾಮಕರ್ಮವೇ ಸನ್ಮುಕ್ತಿ ಪಡೆಯಲು ಅತ್ಯುತ್ತಮ ಮಾರ್ಗವೆಂದು ತಿಳಿಯಹೇಳುತ್ತಾನೆ :

ಅರಿವಿಲ್ಲದಭ್ಯಾಸಕ್ಕಿಂತ ಮಿಗಿಲರಿವು, ಬರಿ
ಅರಿವಿಗಿಂತಲು ಕುರಿತು ಧ್ಯಾನಿಪುದು ಮಿಗಿಲು ।
ಒಂದೆ ಧ್ಯಾನಕು ಮಿಗಿಲು ನಿಷ್ಕಾಮ ಕೈಂಕರ್ಯ,
ಅಲ್ಲಿಂದ ಸನ್ಮುಕ್ತಿ ಬರಿಯೊಂದೆ ಮಜಲು ॥ (೧೨ : ೧೨)

ನಂತರ ಬರುವ ೧೩ ರಿಂದ ೧೯ರ ವರೆಗಿನ ಏಳು ಶ್ಲೋಕಗಳಲ್ಲಿ ಶ್ರೀಕೃಷ್ಣ ತನಗೆ ನಿಕಟರಾದ, ಅತಿಪ್ರಿಯರಾದ, ಎಚ್ಚೆತ್ತ, ಸಾಧುಭಕ್ತರ ವಿವಿಧ ಲಕ್ಷಣಗಳನ್ನು ಲೋಕಸಂಗ್ರಹಕ್ಕಾಗಿ ವರ್ಣಿಸುತ್ತಾನೆ :

ಸಕಲ ಜೀವಕೆ ಪ್ರೀತಿ ಎರೆ, ಹಗೆಯ ಹೊಗೆ ಬೇಡ,
ನೇಹ ಕರುಣದ ಸೆಲೆ ಸತತ ಸ್ರವಿಸುತಿರಲಿ ।
ತಾನು, ತನದೆನ್ನದಲೆ, ತಾನು ಮೇಲೆನ್ನದಲೆ
ಅಳುನಗುಗಳೊಂದಾಗಿಸುವ ಅರಿವು ಬರಲಿ ॥ (೧೨ : ೧೩)

ಎಂದೆಂದು ಮನ ತುಂಬಿ ಯೋಗದನುಭಾವದಲಿ
ನಿಲಲಿ ಒಂದೆಡೆ ಚಿತ್ತ, ತೊಳಲಾಟ ಬೇಡ ।
ಮನಸು ಬುದ್ಧಿಗಳೆನಗೆ ಮುಡಿಪಾಗಿ ಇಟ್ಟಿರುವ
ಆ ಭಕುತನೆನಗೊಲವು ತಿಳಿದುಕೋ ನೋಡ ॥ (೧೨ : ೧೪)

ಪರರಿಂಗೆ ದಾರಿಯಲಿ ಕಲ್ಲುಮುಳ್ಳಾಗದಿರು,
ಹೆರವರೊಡ್ಡುವ ಬಾಧೆಗಳ ತೂರಿ ತೂಗಿ ।
ಭಯ ರಾಗ ಹರುಷಗಳ ಮಿತಿಯದುಮಿ ನಿಲ್ಲುವೊಡೆ
ಗಳಿಸುವೆಯ ನನ್ನೊಲವ, ಬಹು ಸಹಜವಾಗಿ ॥ (೧೨ : ೧೫)

ಆಸೆಗಳ ಮೆಟ್ಟಿ ನಿಲ್, ಆಚಾರ ಶುಚಿಯಿರಲಿ,
ಚೊಕ್ಕವಿರಲಿ ವಿಚಾರ, ತೊರೆಯೆ ವ್ಯಾಮೋಹ ।
ಈ ಜಗದ ವ್ಯವಹಾರಕಂಟಿಕೊಂಡಿರದಿರಲು
ಗಮಿಸುವೆಯ ನನ್ನೆಡೆಗೆ, ಏಕೆ ಸಂದೇಹ? ॥ (೧೨ : ೧೬)

ಹರ್ಷದ್ವೇಷಗಳ ಬಿಡು, ಅನ್ಯಥಾ ಹಿಗ್ಗದಿರು
ಸಿಕ್ಕಾಗ, ಕುಗ್ಗದಿರು ಕೈಸಿಗದೆ ಜಾರೆ ।
ಒಳಿತು ಕೆಡುಕುಗಳ ಬಲೆ ಹರಿದು ಹೊರ ಹಾರಿರಲು
ನನ್ನ ಬಳಿ ನೀ ಬರದೆ, ಇನ್ನಾರು ಬೇರೆ? ॥ (೧೨ : ೧೭)

ಶತ್ರುಗಳು ಯಾರಿಲ್ಲ, ಮಿತ್ರರೇ ಜಗವೆಲ್ಲ,
ಮಾನಾಪಮಾನಗಳಿಗಂತರವೆ ಇಲ್ಲ ।
ಎಂದೆನ್ನು; ಬಿಸಿ ತಣ್ಪು ತೋಷ ಕ್ಲೇಶಗಳನ್ನು
ಸರಿಸುತ್ತ ನಿರ್ವಿಕಾರದಿ ಮೆಲ್ಲ ಮೆಲ್ಲ ॥ (೧೨ : ೧೮)

ಹೊಗಳಿಕೆಗೆ ಹಿಗ್ಗದಲೆ, ತೆಗಳಿಕೆಗೆ ಕುಗ್ಗದಲೆ,
ತನ್ನಂಜಲಿಗೆ ಬಿದ್ದುದಮೃತವೆ ಎಂದು ।
ಚಿರಜಂಗಮತ್ವ ಮೇಣ್ ಸ್ಥಿರಚಿತ್ತ ಸಾಧಿಸುತ
ನನ್ನ ಮಡಿಲಿಗೆ ಬಂದವನೆ ಭಕ್ತಿಬಂಧು ॥ (೧೨ : ೧೯)

ಈ ಏಳು ಶ್ಲೋಕಗಳಲ್ಲಿ ಬಣ್ಣಿಸಲ್ಪಟ್ಟ, ಪರಮಾತ್ಮ ತತ್ತ್ವವನ್ನು ಸಾಧಿಸುವ, ಸಾಕ್ಷಾತ್ಕರಿಸುವ ನಿಟ್ಟಿನಲ್ಲಿ ಹೆಜ್ಜೆ ಯಿಟ್ಟಿರುವ ಭಕ್ತನ ಲಕ್ಷಣಗಳೂ, ಶ್ರೀಮದ್ಭಾಗವತದಲ್ಲಿ ಪಟ್ಟಿ ಮಾಡಲ್ಪಟ್ಟ ಭಾಗವತನಲ್ಲಿರಬೇಕಾದ ಭಗವದ್ಭಕ್ತನ ಲಕ್ಷಣಗಳೂ ಒಂದಕ್ಕೊಂದು ಸರಿಯಾಗಿ ಹೊಂದಿಕೊಳ್ಳುತ್ತವೆ. ಶ್ರೀಮದ್ಭಾಗವತವು ಸತ್ಯ, ದಯೆ, ತಪಸ್ಸು, ಶುಚಿತ್ವ, ತಾಳ್ಮೆ, ಶಮ, ದಮ, ಅಹಿಂಸೆ, ಬ್ರಹ್ಮಚರ್ಯ, ತ್ಯಾಗ, ನಿರಂತರ ಅಧ್ಯಯನ, ಋಜುತ್ವ, ಸಂತೋಷ, ಸಮದೃಷ್ಟಿ, ಸೇವೆ, ಭೋಗದಿಂದ ಬಿಡುಗಡೆ, ವೈರಾಗ್ಯ, ಮೌನ, ಆತ್ಮವಿಮರ್ಶೆ; ತಾನು ತಿನ್ನುವ ಆಹಾರವನ್ನು ಇತರ ಜೀವಿಗಳೊಡನೆ ಹಂಚಿಕೊಳ್ಳುವುದು; ಸಹಮಾನವರೂ ಸೇರಿದಂತೆ ಎಲ್ಲಾ ಜೀವಿಗಳಲ್ಲಿ ತನ್ನನ್ನು, ಭಗವಂತನನ್ನು ಕಾಣುವ ದೃಷ್ಟಿ; ಭಗವನ್ನಾಮ ಕೇಳುವುದು, ಭಗವಂತನ ನಾಮಸ್ಮರಣೆ ಮಾಡುವುದು, ಭಗವಂತನನ್ನು ಭಜಿಸುವುದು, ಭಗವಂತನ ಪಾದಸೇವೆ, ಪೂಜೆ, ವಂದನೆ, ದಾಸ್ಯ, ಸ್ನೇಹ, ಆತ್ಮಸಮರ್ಪಣ – ಎಂಬೀ ಮೂವತ್ತು ಲಕ್ಷಣಗಳನ್ನು ಭಾಗವತೋತ್ತಮನಿಗೆ ವಿಧಿಸಿದೆ. ಇವೆಲ್ಲ ಲಕ್ಷಣಗಳೂ ವಿಶ್ವಮಾನವ ಧರ್ಮವನ್ನೇ ಬೊಟ್ಟು ಮಾಡಿ ತೋರಿಸುತ್ತವೆ.

ಅಂತಿಮವಾಗಿ ಇಪ್ಪತ್ತನೇ ಶ್ಲೋಕದಲ್ಲಿ ಮಗುದೊಮ್ಮೆ ಶ್ರೀಕೃಷ್ಣ, 'ಯಾರು ತನಗೆ ಅತಿ ಪ್ರಿಯರಾದ ಭಕ್ತಸಾಧಕರನ್ನು ಆದರ್ಶವಾಗಿಟ್ಟುಕೊಂಡು ಅವರು ತೋರಿಸಿದ ಋಜು ಮಾರ್ಗದಲ್ಲೇ ನಡೆಯುವರೋ ಅಂತಹವರೂ ಕೂಡ ತನಗೆ ಆತ್ಮೀಯರಾಗುವರು' ಎಂದು ಘೋಷಿಸುವುದರೊಂದಿಗೆ ಈ ಮಧುಮಧುರವಾದ 'ಭಕ್ತಿಯೋಗ'ವೆಂಬ ಅಧ್ಯಾಯಕ್ಕೆ ತೆರೆ ಬೀಳುತ್ತದೆ. ಇಲ್ಲಿ ಬರುವ ಅಪರೂಪದ ಅಭಿವ್ಯಕ್ತಿ "ಧರ್ಮ್ಯಾಮೃತ" ದ ಕಡೆಗೆ (ಸಂಸ್ಕೃತ ಪಾಠಾಂತರದಲ್ಲಿ) ಗಮನವಿರಲಿ :

ಈ ಯೋಗ ಮಧುಮಧುರ, ಅರಿವಿಟ್ಟು ಸೇವಿಸುತ
ಉಕ್ತ ಋಜು ಮಾರ್ಗದಲಿ ನಡೆಯುತ್ತ ನೆಚ್ಚಿ ।
ಶ್ರದ್ಧೆ ಭಕ್ತಿಗಳಿಂದ ನನ್ನನ್ನೆ ತಲೆವಾಗಿ
ಭಜಿಸುತಿರೆ ನಾನೊಲಿವೆ, ಅವನನ್ನು ಮೆಚ್ಚಿ ॥ (೧೨ : ೨೦)

– ಓಂ ತತ್ಸತ್ –

## ಗೀತೆಯನ್ನು ಕುರಿತು ಶ್ರೀರಾಮಕೃಷ್ಣರು

ಗೀತೆಯ ಸಂಚಿತಾರ್ಥವೇನು? ಹತ್ತು ಸಲ ಉಚ್ಚರಿಸಿದರೆ ಅದು ಏನಾಗಿ ಕೇಳಿ ಬರುತ್ತದೆಯೊ ಅದೇ ಅದು. 'ಗೀತಾ', 'ಗೀತಾ' ಎಂಬುದಾಗಿ ಹತ್ತು ಸಲ ಉಚ್ಚರಿಸಿದರೆ ಅದು 'ತ್ಯಾಗಿ', 'ತ್ಯಾಗಿ' ಎಂಬುದಾಗಿ ಕೇಳಿಬರುತ್ತದೆ. ಎಂದರೆ ಗೀತೆಯ ಉಪದೇಶ: 'ಹೇ ಜೀವ, ಎಲ್ಲವನ್ನೂ ತ್ಯಾಗಮಾಡಿ ಭಗವಂತನ ಸಾಕ್ಷಾತ್ಕಾರಕ್ಕೆ ಪ್ರಯತ್ನಿಸು' ಎಂಬುದಾಗಿ. ಸಾಧುವೇ ಆಗಲಿ, ಸಂಸಾರಿಯೇ ಆಗಲಿ, ಎಲ್ಲರೂ ಆಸಕ್ತಿಗಳನ್ನು ಮನಸ್ಸಿನಿಂದ ತೊಡೆದುಹಾಕಬೇಕು.

ಚೈತನ್ಯದೇವ ದಕ್ಷಿಣಭಾರತದಲ್ಲಿ ತೀರ್ಥಯಾತ್ರೆ ಮಾಡುತ್ತಿದ್ದಾಗ, ಒಬ್ಬ ಗೀತೆ ಓದುತ್ತಿರುವುದನ್ನು ನೋಡಿದ. ಇನ್ನೊಬ್ಬ ಸ್ವಲ್ಪ ದೂರದಲ್ಲೇ ಕುಳಿತು ಅದನ್ನು ಕೇಳುತ್ತ ಅಳುತ್ತಿದ್ದ. ಆತನ ಕಣ್ಣುಗಳಲ್ಲಿ ನೀರು ಸುಮ್ಮನೆ ತುಂಬಿಕೊಂಡಿತ್ತು. ಚೈತನ್ಯದೇವ ಆತನನ್ನು ಕೇಳಿದ: 'ಏನು, ಇದೆಲ್ಲಾ ನಿನಗೆ ಅರ್ಥವಾಗುತ್ತದೆಯೆ?' ಆತ ಹೇಳಿದ: 'ಇಲ್ಲ, ಈ ಶ್ಲೋಕ ಎಳ್ಳಷ್ಟೂ ಅರ್ಥವಾಗುವುದಿಲ್ಲ.' ಚೈತನ್ಯದೇವ ಕೇಳಿದ, 'ಹಾಗಾದರೆ ಏಕೆ ಅಳುತ್ತಾ ಇದ್ದೀಯೆ?' ಭಕ್ತ ಹೇಳಿದ: 'ನಾನು ಅರ್ಜುನನ ರಥ ನೋಡುತ್ತಾ ಇದ್ದೇನೆ. ಶ್ರೀಕೃಷ್ಣ ಮತ್ತು ಅರ್ಜುನ ಅದರಲ್ಲಿ ಕುಳಿತು ಮಾತುಕತೆಯಾಡುತ್ತಿರುವುದು ನನ್ನ ಕಣ್ಣಿಗೆ ಕಾಣುತ್ತಿದೆ. ಅದನ್ನು ನೋಡಿ ಅಳುತ್ತಾ ಇದ್ದೇನೆ.'

–ಶ್ರೀರಾಮಕೃಷ್ಣ ಪರಮಹಂಸ *('ಶ್ರೀರಾಮಕೃಷ್ಣ ವಚನವೇದ'* ಭಾಗ ೧, ಪು.೩೬)

# ವ್ಯಕ್ತಿತ್ವ ವಿಕಸನದ ಮಹತ್ವ

–ಜೆ. ಲೋಹಿತ್

**ವ್ಯಕ್ತಿತ್ವ ವಿಕಸನದ ಮಹತ್ವವನ್ನು ವಿವಿಧ ನೆಲೆಗಳಿಂದ ವಿಶ್ಲೇಷಿಸಿರುವ ಶ್ರೀ ಜೆ. ಲೋಹಿತ್ ಅವರು ಮಹಾರಾಜಾ ಕಾಲೇಜಿನ ಪತ್ರಿಕೋದ್ಯಮ ವಿಭಾಗದಲ್ಲಿ ಉಪನ್ಯಾಸಕರಾಗಿದ್ದಾರೆ.**

ಮಾನವನ ವ್ಯಕ್ತಿತ್ವವು ವಿಶೇಷತೆಯಿಂದ ಕೂಡಿರುವಂತಹುದು. ಅದಕ್ಕಿರುವ ದೈಹಿಕ, ಮಾನಸಿಕ, ಭಾವನಾತ್ಮಕ, ಸಾಮಾಜಿಕ ಹಾಗೂ ಆಧ್ಯಾತ್ಮಿಕವಾದ ಪಂಚಮುಖಗಳ ಬೆಳವಣಿಗೆಯೇ ಸಮನ್ವಯಿತ ವ್ಯಕ್ತಿತ್ವದ ವಿಕಸನವಾಗಿದೆ. ಗಾಂಧೀಜಿಯವರು ಮಾನವನ ವ್ಯಕ್ತಿತ್ವ ವಿಕಸನದ ಪ್ರಕ್ರಿಯೆಯನ್ನು ಶಿಕ್ಷಣದ ಅರ್ಥ ವಿವರಣೆಯೊಂದಿಗೆ 'ಶಿಕ್ಷಣವೆಂದರೆ ಮಗುವಿನ ಮತ್ತು ಮಾನವನ ದೇಹ, ಮನಸ್ಸು ಹಾಗೂ ಆತ್ಮ ಇವುಗಳಲ್ಲಿನ ಅತ್ಯುತ್ತಮವಾದುದನ್ನು ಪ್ರಕಟಗೊಳಿಸುವುದು' ಎಂದು ಪರಿಭಾವಿಸಿದ್ದಾರೆ. ಸ್ವಾಮಿ ವಿವೇಕಾನಂದರು ಸೌಹಾರ್ದಪೂರ್ಣವಾಗಿ ವಿಕಸನ ಹೊಂದಿದ ವ್ಯಕ್ತಿಗಳಿಗಾಗಿ ಹಾತೊರೆದಿದ್ದೂ, ಹೃದಯವಂತಿಕೆಯಿಂದ ಹಾಗೂ ಮಾನಸಿಕ ವಿಚಾರಧಾರೆಯಿಂದ ಉನ್ನತವಾಗಿರುವ ವ್ಯಕ್ತಿಗಳನ್ನು ಕುರಿತು ಚಿಂತಿಸಿದ್ದೂ ವ್ಯಕ್ತಿತ್ವ ವಿಕಸನದ ಸಲ್ಲಕ್ಷಣಗಳಾಗಿವೆ.

ಇಂದಿನ ಸಾಮಾಜಿಕ ಬದುಕಿನ ಸಂಕೀರ್ಣ ಸನ್ನಿವೇಶದಲ್ಲಿ ವ್ಯಕ್ತಿತ್ವದ ಮಹತ್ವ ಹೆಚ್ಚುತ್ತಾ ಸಾಗಿದೆ. ಇಂದು ಬದುಕಿನ ಸ್ಥಿತಿಗತಿಗಳಲ್ಲಿ ಕ್ಷಿಪ್ರ ಬದಲಾವಣೆಗಳಾಗುತ್ತಲಿವೆ. ಹೀಗಾಗಿ ವ್ಯಾವಹಾರಿಕವಾದ ಇಂದಿನ ಬದುಕಿನಲ್ಲಿ ವ್ಯಕ್ತಿತ್ವಕ್ಕೆ ಹೆಚ್ಚಿನ ಮಹತ್ವವಿದೆ. ವ್ಯಕ್ತಿಯು ತನ್ನ ಬದುಕಿನ ವಿವಿಧ ಸಂದರ್ಭಗಳಲ್ಲಿ ಹಲವಾರು ಪಾತ್ರಗಳನ್ನು ನಿರ್ವಹಿಸಬೇಕಾದಾಗ ಆತನ ಪ್ರತಿಯೊಂದು ಪಾತ್ರ ನಿರ್ವಹಣೆ ಮಾದರಿ ಎನಿಸಬೇಕಾದರೆ ಆತನಲ್ಲಿ ಸ್ವೀಕಾರಾರ್ಹವಾದ ವ್ಯಕ್ತಿತ್ವ ಇರಬೇಕಾಗುವುದು. ವ್ಯಕ್ತಿಯ ಸಂಬಂಧಗಳು, ಭಾವನೆಗಳು, ಜ್ಞಾನ, ಬುದ್ಧಿಮತ್ತೆ ಮತ್ತು ತನ್ನ ಕರ್ತವ್ಯದಲ್ಲಿರುವ ತಾದಾತ್ಮ್ಯತೆ ಇವೆಲ್ಲವೂ ವ್ಯಕ್ತಿಯ ವ್ಯಕ್ತಿತ್ವವನ್ನು ನಿರ್ಧರಿಸುತ್ತವೆ.

ವ್ಯಕ್ತಿಯ ಸ್ವಭಾವಜನ್ಯ ಗುಣಧರ್ಮಗಳು (Basic), ಖ್ಯಾತಿ (Reputation), ಸಾಧನೆಗಳು (Achievement), ಆಸ್ತಿ ಮೌಲ್ಯ (Networth), ಹಾಗೂ ಗೌರವ (Dignity), ಇವೆಲ್ಲದರ ಮೊದಲ ಅಕ್ಷರಗಳನ್ನು ಸೇರಿಸಿದರೆ 'BRAND' ಎಂಬ ಶಬ್ದಗಳ ಸಂಗಮವೇ ವ್ಯಕ್ತಿತ್ವವಾಗಿದೆ. ಇಲ್ಲಿ ಆಸ್ತಿಮೌಲ್ಯ ಎಂದರೆ ಕೇವಲ ಹಣ, ಆಸ್ತಿ ಎಂದಲ್ಲ. ಪ್ರತಿ ವ್ಯಕ್ತಿಯೂ ಆರೋಗ್ಯ, ಖ್ಯಾತಿ, ಸಂಪತ್ತು, ಪ್ರೇಮ, ಜ್ಞಾನ ಹಾಗೂ ದೈವೀಪ್ರೇಮ ಎಂಬ ಆರು ಬಗೆಯ ಸದ್ಗುಣಗಳೆಂಬ ಸಂಪತ್ತನ್ನು ಸಂಪಾದಿಸಿರಬೇಕು. ಅವುಗಳನ್ನು ಸಂಪಾದಿಸುವುದೊಂದೇ ಮುಖ್ಯವಲ್ಲ, ಹೀಗೆ ಗಳಿಸಿದ ಸಂಪತ್ತನ್ನು ಜೀವನದುದ್ದಕ್ಕೂ ಸದ್ವರ್ತನೆ, ಜ್ಞಾನ ಹಾಗೂ ಆತ್ಮಾವಲೋಕನಗಳಿಂದ ಹೆಚ್ಚಿಸಿಕೊಳ್ಳಲು ಯತ್ನಿಸುತ್ತಿರಬೇಕು.

ಯಶಸ್ಸು ಎಂಬುದು ತನ್ನಿಂದ ತಾನೇ ಬರುವಂತಹುದಲ್ಲ. 'ಆಸಕ್ತಿ' ಎಂಬುದು ಯಶಸ್ಸಿನ ಮೂಲ ಮಂತ್ರ. ಆಸಕ್ತಿಯಿಂದ ಶಿಕ್ಷಣ ಜ್ಞಾನವನ್ನು ಪಡೆದುಕೊಳ್ಳಬೇಕೆಂಬುದನ್ನು ವ್ಯಕ್ತಿತ್ವ ವಿಕಸನ ಕಲಿಸುತ್ತದೆ. ಎಲ್ಲರಲ್ಲೂ ಪ್ರತಿಭೆ ಇದೆ, ಸಾಮರ್ಥ್ಯವಿದೆ. ಅದನ್ನು ಅರಿತುಕೊಂಡು ಯಶಸ್ವಿಯಾಗುವುದು ಭದ್ರವಾಗಿ ನಿರ್ಮಿಸಿಕೊಂಡ ವ್ಯಕ್ತಿತ್ವದಿಂದ ಮಾತ್ರ ಸಾಧ್ಯ. ಆಧುನಿಕ ಸಮಾಜದಲ್ಲಿ ವ್ಯಕ್ತಿತ್ವ ವಿಕಸನಕ್ಕೆ ಹೆಚ್ಚಿನ ಮಹತ್ವವನ್ನು ಕೊಡಲಾಗಿದೆ. ವ್ಯಕ್ತಿಯು ಸಕ್ರಿಯವಾಗಿ, ಸಮಾಜದ ತುಡಿತಕ್ಕೆ ಸಕಾರಾತ್ಮಕವಾಗಿ ಪ್ರತಿಸ್ಪಂದಿಸುವುದಕ್ಕೆ ವ್ಯಕ್ತಿತ್ವ ವಿಕಸನ ಅವಕಾಶ ಕಲ್ಪಿಸುತ್ತದೆ. ವ್ಯಕ್ತಿಯ ವ್ಯಕ್ತಿತ್ವವನ್ನು ನಿರ್ಧರಿಸುವಲ್ಲಿ ಮತ್ತು ಅರಳಿಸುವಲ್ಲಿ ಶಿಕ್ಷಣ, ತರಬೇತಿ, ಆಪ್ತ ಸಮಾಲೋಚನೆ ಮತ್ತು ಸಂಘಟಿತ ಪ್ರಯತ್ನಗಳು ಫಲ ನೀಡುತ್ತವೆ. ಇವು ವ್ಯಕ್ತಿಯ ಶಕ್ತಿ–ಸಾಮರ್ಥ್ಯಗಳನ್ನು ಹೆಚ್ಚಿಸುವಲ್ಲಿ ಪ್ರಮುಖವಾಗಿವೆ. ಹಾಗಾಗಿ ವ್ಯಕ್ತಿತ್ವ ವಿಕಸನ ಯೋಜನೆಗಳಿಗೆ ಶಿಕ್ಷಣ ಮತ್ತು ತರಬೇತಿ ಕೇಂದ್ರಬಿಂದುವೆಂದು ಪರಿಗಣಿಸಲಾಗಿದೆ.

ವ್ಯಕ್ತಿತ್ವದ ಕೆಲವು ಲಕ್ಷಣಗಳು ಅಂದರೆ: ಉದಾಹರಣೆಗೆ ಬೇರೆಯವರನ್ನು ಅರಿತುಕೊಳ್ಳುವ ಸಾಮರ್ಥ್ಯ, ನಾಯಕತ್ವ, ತೀರ್ಮಾನ ತೆಗೆದುಕೊಳ್ಳುವ ಸಾಮರ್ಥ್ಯ, ಸಂವಹನ ಸಾಮರ್ಥ್ಯ– ಇವು, ವ್ಯಕ್ತಿಯ ಹಾಗೂ ಸಂಘಟನೆಗಳ ಯಶಸ್ಸನ್ನು ನಿರ್ಧರಿಸಬಲ್ಲವು. ಕೆಲವು ಜಾಹೀರಾತುಗಳು ತಮಗೆ ಎಂತಹ ವ್ಯಕ್ತಿಗಳು ಬೇಕೆಂಬುದನ್ನು ಸ್ಪಷ್ಟಪಡಿಸುತ್ತದೆ. ಉದಾ : "Wanted people with 'kinetic energy', emotional maturity and the ability to deal with large number of people in a fairly chaotic situation". ವ್ಯಕ್ತಿಯು ಹೆಚ್ಚಿನ ಪ್ರತಿಫಲ ತಂದುಕೊಡಬಲ್ಲ, ಘನತೆ–ಗೌರವಗಳನ್ನು ಹೊಂದಿದ ಒಂದು ಉದ್ಯೋಗ ಕ್ಷೇತ್ರವನ್ನು ಪ್ರವೇಶಿಸಬೇಕಾದರೆ ಆತ ವ್ಯಕ್ತಿತ್ವದ ಕೆಲವು ಲಕ್ಷಣಗಳನ್ನು ಹೊಂದಿರಬೇಕು, ಇಲ್ಲವೆ ಬೆಳೆಸಿಕೊಂಡಿರಬೇಕು. ಉದ್ಯೋಗವನ್ನು ಪಡೆದ ಮಾತ್ರಕ್ಕೆ ಜೀವನದ ಅಂತಿಮ ಗುರಿ ತಲುಪಿದೆವು ಎಂದಲ್ಲ! ಪಡೆದ ವೃತ್ತಿಯಲ್ಲಿ ಯಶಸ್ಸನ್ನು ಪಡೆಯಬೇಕು. ಆ ನಿಟ್ಟಿನಲ್ಲಿ "ವ್ಯಕ್ತಿತ್ವ ವಿಕಸನ ಉದ್ಯೋಗ



ಪಡೆಯುವುದಕ್ಕೆ ಮಾತ್ರವಲ್ಲ, ಪಡೆದ ಉದ್ಯೋಗದಲ್ಲಿ ಯಶಸ್ಸನ್ನು ಪಡೆಯುವುದಕ್ಕೂ ಆವಶ್ಯಕವಾಗಿದೆ". ವ್ಯಕ್ತಿಗಳು ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುವಾಗ ತಂದೆ, ತಾಯಿ, ಗುರು ಮುಂತಾದವರನ್ನು ಮಾದರಿಯಾಗಿ(model)ಇಟ್ಟುಕೊಳ್ಳುತ್ತಾರೆ. ಈ ದೃಷ್ಟಿಯಿಂದ ಅಂಥ ಹಿರಿಯ ವ್ಯಕ್ತಿಗಳು ಉತ್ತಮ ವ್ಯಕ್ತಿತ್ವವನ್ನು ಹೊಂದಿರುವುದು ಆವಶ್ಯಕವಾಗಿದೆ.

ಸಮಾಜವು ಯಾವಾಗಲೂ ಉತ್ತಮ ವ್ಯಕ್ತಿತ್ವವನ್ನು ಹೊಂದಿರುವವರಿಗೆ ಹೆಚ್ಚಿನ ಮಹತ್ವವನ್ನು ಕೊಡುತ್ತದೆ. ಅಂತಹ ವ್ಯಕ್ತಿಗಳು ಮಾತನಾಡಿದರೆ ಎಲ್ಲರೂ ಆಲಿಸುತ್ತಾರೆ. ಅವರು ಮಾರ್ಗದರ್ಶನ ನೀಡಿದರೆ ಜನ ಅವರನ್ನು ನಾಯಕರೆಂದು ಪರಿಗಣಿಸಿ, ಹಿಂಬಾಲಿಸುತ್ತಾರೆ. ಈ ರೀತಿ 'ಉತ್ತಮ ನಾಯಕರಾಗಬೇಕೆಂದರೆ, ಸಾರ್ವಜನಿಕ ಜೀವನದಲ್ಲಿ ಪ್ರಭಾವಿ ವ್ಯಕ್ತಿಗಳಾಗಬೇಕೆಂದರೆ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳುವುದು ಅತ್ಯಂತ ಮಹತ್ವದ್ದಾಗಿದೆ. ಸಂದರ್ಶಕರು, ಸಂದರ್ಶನ ಮತ್ತು ಗುಂಪು ಚರ್ಚೆಗಳಲ್ಲಿ ವ್ಯಕ್ತಿಯ ವ್ಯಕ್ತಿತ್ವವನ್ನು ಗುರುತಿಸಿ, ಅವರು ಉದ್ಯೋಗಕ್ಕೆ ಅರ್ಹರೋ, ಇಲ್ಲವೋ ಎಂದು ತೀರ್ಮಾನಿಸುತ್ತಾರೆ. ನಮ್ಮ ವ್ಯಕ್ತಿತ್ವವು ಪ್ರಭಾವ ಬೀರುವಂತಿದ್ದರೆ, ಆಕರ್ಷಕವಾಗಿದ್ದರೆ ಉದ್ಯೋಗ ಸಿಗುವ ಸಾಧ್ಯತೆ ಹೆಚ್ಚಾಗುತ್ತದೆ. ಹಾಗಾಗಿ ಉದ್ಯೋಗಾಕಾಂಕ್ಷಿಗಳು ವ್ಯಕ್ತಿತ್ವ ವಿಕಸನ ಮಾಡಿಕೊಳ್ಳುವುದು ಅನಿವಾರ್ಯ.

ವ್ಯಕ್ತಿತ್ವದ ಕೇಂದ್ರವನ್ನು ಐದು ಆಯಾಮಗಳು ಸುತ್ತುವರಿದಿರುತ್ತವೆ. ಅವುಗಳೆಂದರೆ ೧. ಭೌತಿಕ ಆಯಾಮ ೨. ಶಕ್ತಿ ಆಯಾಮ ೩. ಮಾನಸಿಕ ಆಯಾಮ ೪. ಬೌದ್ಧಿಕ ಆಯಾಮ ೫. ಪರಮಸುಖದ ಆಯಾಮ.

**೧. ಭೌತಿಕ ಆಯಾಮ (Physical Dimension):** ಇದು ವ್ಯಕ್ತಿಯ ದೇಹ ಮತ್ತು ಪ್ರಜ್ಞೆಯನ್ನು ಒಳಗೊಂಡಿರುತ್ತದೆ.

**೨. ಶಕ್ತಿ ಆಯಾಮ (Energy Dimension):** ಇದು ಆಹಾರ ಜೀರ್ಣವಾಗುವಿಕೆ, ರಕ್ತಪರಿಚಲನೆ, ಉಸಿರಾಟ ಮತ್ತು ಇತರೆ ದೈಹಿಕ ಚಟುವಟಿಕೆಗಳನ್ನು ಒಳಗೊಂಡಿರುತ್ತದೆ.

**೩. ಮಾನಸಿಕ ಆಯಾಮ (Mental Dimension):** ವೈಚಾರಿಕ, ಭಾವನಾತ್ಮಕ ಮುಂತಾದ ಮನೋವೈಜ್ಞಾನಿಕ ಪ್ರಕ್ರಿಯೆಗಳನ್ನು ಈ ಆಯಾಮ ಒಳಗೊಂಡಿರುತ್ತದೆ.

**೪. ಬೌದ್ಧಿಕ ಆಯಾಮ (Intellectual Dimension):** ಸಕಾರಾತ್ಮಕ ಸ್ವರೂಪದ ತಾರತಮ್ಯ ನೀತಿ ತೋರಿಸುವುದು, ಸರಿ–ತಪ್ಪನ್ನು ಪ್ರತ್ಯೇಕಿಸುವುದು, ಇಚ್ಛಾಶಕ್ತಿ ಮುಂತಾದ ಬೌದ್ಧಿಕ ಚಟುವಟಿಕೆಗಳನ್ನು ಈ ಆಯಾಮ ಹೊಂದಿರುತ್ತದೆ.

**೫. ಪರಮಸುಖದ ಆಯಾಮ (Blissful Dimension):** ಪರಮಸುಖದಿಂದ ವ್ಯಕ್ತಿ ಪಡೆಯುವ ಅತ್ಯಾನಂದದ ಅನುಭವವನ್ನು ಈ ಆಯಾಮ ಒಳಗೊಂಡಿರುತ್ತದೆ.

ವ್ಯಕ್ತಿತ್ವದ ಬೆಳವಣಿಗೆಯು ವ್ಯಕ್ತಿ ತನ್ನನ್ನು ತಾನು ಗುರುತಿಸಿಕೊಳ್ಳುವುದನ್ನು ಸೂಚಿಸುತ್ತದೆ ಹಾಗೂ ಆ ರೀತಿ ಗುರುತಿಸಿಕೊಳ್ಳುವುದಕ್ಕೆ ಅವಕಾಶ ಮಾಡಿಕೊಡುತ್ತದೆ. "The sum total of biological innate dispositions impulses, tendencies, aptitudes, instincts of the individual and the dispositions of tendencies acquired of experience" ಎಂಬ ಮಾರ್ಟಿನ್ ಪ್ರಿನ್ಸ್‌ರ ಅಭಿಪ್ರಾಯದಂತೆ ವ್ಯಕ್ತಿತ್ವವು ಕೇವಲ ಅಂಗಾಗಗಳ ರಚನೆ, ಬಾಹ್ಯ ಸ್ವರೂಪ ಹಾಗೂ ದೈಹಿಕ ರಚನೆಯನ್ನು ಮಾತ್ರ ಒಳಗೊಂಡಿರದೆ ವ್ಯಕಿಯ ಬುದ್ಧಿಮತ್ತೆ, ಆಲೋಚನಾಶಕ್ತಿ, ಮನೋಭಾವ ಮುಂತಾದ ಸಂಗತಿಗಳನ್ನೊಳಗೊಂಡ ಒಂದು ಸಂಕೀರ್ಣ ವ್ಯವಸ್ಥೆಯಾಗಿದೆ.

ವ್ಯಕ್ತಿತ್ವದ ಬೆಳವಣಿಗೆಯಿಂದಲೇ ವ್ಯಕ್ತಿಯ ಮಹತ್ವ ಹೆಚ್ಚುವುದು. ಇದು ಕುಟುಂಬ, ಸಮಾಜ, ರಾಷ್ಟ್ರಕ್ಕೆ ಹಲವಾರು ರೀತಿಯಿಂದ ಸಹಕಾರಿಯಾಗುವುದು.

**೧. ಸ್ವಯಂಪ್ರಜ್ಞೆಯ (ತಿಳಿವಳಿಕೆ) ಬೆಳವಣಿಗೆ (Self Realisation):** ಇಂದಿನ ಆಧುನಿಕ ಯುಗದಲ್ಲಿ ಸ್ವಯಂಪ್ರಜ್ಞೆ ಹಾಗೂ ಇತರರ ಬಗೆಗಿನ ಪಾರಸ್ಪಾರಿಕ ತಿಳಿವಳಿಕೆಗಳು (Self-Realisation and Mutual Understanding) ಅತಿ ಅವಶ್ಯವಾಗಿವೆ. ವ್ಯಕ್ತಿತ್ವದ ವಿಕಸನದಿಂದ ವೈಯಕ್ತಿಕ ಪ್ರಗತಿಯ ಜೊತೆಗೆ ಸಾಮಾಜಿಕ ಬಾಂಧವ್ಯಗಳ ಬೆಳವಣಿಗೆಯೂ ಸಾಧ್ಯವಾಗುತ್ತದೆ. ಯೂಂಗ್‌ರವರ ಮನೋವಿಜ್ಞಾನವೂ ಇದನ್ನೇ ಸಾದರಪಡಿಸುತ್ತದೆ. 'ವ್ಯಕ್ತಿಯು ಸ್ವಯಂಪ್ರಜ್ಞೆ ಅಥವಾ ಸ್ವಯಂ ತಿಳಿವಳಿಕೆಯನ್ನು ಹೆಚ್ಚಿಸಿಕೊಂಡು ತನ್ನ ಸಹಚರರ ಬಗೆಗೆ ಸಹನೆ ಹಾಗೂ ಅಂತಃಕರಣಗಳನ್ನು ಬೆಳೆಸಿಕೊಂಡು ಮಾನವ ಸಮಾಜಕ್ಕೆ ಋಣಿಯಾಗಿರಬೇಕು' ಎಂಬ ಸಂಗತಿಯನ್ನು ಮನೋವಿಜ್ಞಾನವು ಪ್ರತಿಪಾದಿಸುತ್ತದೆ. ('Jung's Psychology aims at making man to realise the need for self- knowledge and realisation so that he may cultivate tolerance and kindness with regard to his fellowmen and make himself fully sensible of his responsibilities in relation to humanity.' –The Psychology of C.J. Jung)

ಪ್ರಾಚೀನ ಯುಗದಲ್ಲಿ 'ಸದ್ಗುಣವೇ ಶಕ್ತಿ' (Virtue is Power) ಎಂಬ ನಂಬಿಕೆಯಿದ್ದರೆ ಇಂದು ವಿಜ್ಞಾನಯುಗದಲ್ಲಿ 'ಜ್ಞಾನವೇ ಶಕ್ತಿ' (Knowledge is power) ಎಂದು ನಂಬಲಾಗಿದೆ. ಇಂದು ವ್ಯಕ್ತಿಯ ಜ್ಞಾನದ ಹರಿವು ವಿಶಾಲವಾಗಬೇಕಾದರೆ ಹಾಗೂ ತಾನು ಮಾಡುತ್ತಿರುವ ಪ್ರಮಾದಗಳ ಅರಿವಾಗಬೇಕಾದರೆ ಹಲವು ಚಿಂತನಕಾರರ, ದಾರ್ಶನಿಕರ, ತತ್ವಜ್ಞಾನಿಗಳ, ರಾಜನೀತಿ ತಜ್ಞರ, ಸಮಾಜ ಸುಧಾರಕರ ಚಿಂತನೆಗಳನ್ನು ಹಾಗೂ ವಿಚಾರಗಳನ್ನು ಅಧ್ಯಯನ ಮಾಡಬೇಕು. ಇವುಗಳ ಅಧ್ಯಯನದ ಚಿಂತನ, ಮಂಥನದಿಂದ ವ್ಯಕ್ತಿಯ ಬೆಳವಣಿಗೆಯಾಗುತ್ತದೆ. ಆತನ ಪ್ರಜ್ಞೆ, ಅರಿವು ಜಾಗೃತವಾಗುತ್ತದೆ. ವ್ಯಕ್ತಿಯ ವ್ಯಕ್ತಿತ್ವದ ಇತಿಮಿತಿಗಳ



ಪ್ರಜ್ಞೆಯೇ ಸ್ವಯಂಪ್ರಜ್ಞೆ (Self-Realisation). ವ್ಯಕ್ತಿಯು ತನ್ನ ವ್ಯಕ್ತಿತ್ವದ ವಿಕಸನದಿಂದ ಆದರ್ಶಗಳನ್ನು, ಮೌಲ್ಯ ಮತ್ತು ಸಾಮಾಜಿಕ ಸದ್ಗುಣಗಳನ್ನು (Ideals, Values and Social Virtues) ತನ್ನ ಬದುಕಿನಲ್ಲಿ ಅಳವಡಿಸಿಕೊಂಡು ತನ್ನ ಜೊತೆಗೆ ತನ್ನ ಪರಿಸರವನ್ನೂ ಬೆಳೆಸುತ್ತಾನೆ; ಅದನ್ನು ಪ್ರಗತಿಪಥದೆಡೆಗೆ ಕೊಂಡೊಯ್ಯುತ್ತಾನೆ.

**೨. ಸಾಂಸ್ಕೃತಿಕ ಸಾಮರಸ್ಯದ ಬೆಳವಣಿಗೆ (Preservation of Cultural Hormony):** ವ್ಯಕ್ತಿತ್ವ ವಿಕಸನದಿಂದ ವ್ಯಕ್ತಿಯಲ್ಲಿ 'ವಿಶ್ವವೇ ತನ್ನ ಮನೆ, ಮಾನವಕುಲವೇ ತನ್ನ ಕುಟುಂಬ' ಎಂಬ ವಿಶ್ವಭ್ರಾತೃತ್ವ ಭಾವನೆಗಳು ಬೆಳೆಯುತ್ತವೆ. ಉದಾ: ಸಾಕ್ರೆಟಿಸ್, ಪ್ಲೇಟೋ, ಕನ್‌ಫ್ಯೂಶಿಯಸ್, ಬಸವಣ್ಣ, ಬುದ್ಧ, ಕೌಟಿಲ್ಯ ಮುಂತಾದ ಚಿಂತಕರ ಆಲೋಚನೆಗಳಿಂದ ವ್ಯಕ್ತಿತ್ವವು ಪರಿಪೂರ್ಣತೆಯ ಹಂತವನ್ನು ತಲುಪುತ್ತದೆ. ವ್ಯಕ್ತಿಯು ಜಾತಿ, ಮತ, ಪಂಥ, ಸಂಸ್ಕೃತಿ, ಸಂಸ್ಕಾರಗಳ ಗಡಿಯನ್ನು ಮೀರಿ ಬೆಳೆದಿರುತ್ತಾನೆ. ವ್ಯಷ್ಟಿಪ್ರಜ್ಞೆ ಕಣ್ಮರೆಯಾಗಿ ಸಮಷ್ಟಿಪ್ರಜ್ಞೆ ಜಾಗೃತವಾಗುತ್ತದೆ. ವ್ಯಕ್ತಿಯು ಆಗ ಸದಾ ತನ್ನ ಸಮಾಜದ ಏಳಿಗೆಗಾಗಿ ಚಿಂತಿಸುತ್ತಾನೆ. ಹೀಗೆ ವ್ಯಕ್ತಿಯ ವ್ಯಕ್ತಿತ್ವದ ವಿಕಸನದಿಂದ ವಿವಿಧ ಜನಾಂಗ, ಸಮೂಹ, ರಾಷ್ಟ್ರಗಳ ನಡುವೆ ಸುಮಧುರ ಬಾಂಧವ್ಯಗಳು ಬೆಳೆಯಲು ಸಹಕಾರಿಯಾಗುತ್ತದೆ.

**೩. ಸಮಸ್ಯೆಗಳಿಗೆ ಸೂಕ್ತ ಪರಿಹಾರ (Solutions for Problems):** ಸಮಾಜದಲ್ಲಿ ಜಾತೀಯತೆ, ಅಸ್ಪೃಶ್ಯತೆ, ದೇವದಾಸಿ ಪದ್ಧತಿ, ಬಾಲ್ಯವಿವಾಹ, ಅಪರಾಧ, ಮದ್ಯಪಾನ, ಮಾದಕ ಪದಾರ್ಥ ಗಳ ಸೇವನೆ, ಭ್ರಷ್ಟಾಚಾರ, ಭಯೋತ್ಪಾದನೆ ಮುಂತಾದ ಸಮಸ್ಯೆಗಳು ತಲೆದೋರಲು ವಿಘಟಿತ ವ್ಯಕ್ತಿತ್ವವೇ ಮೂಲಕಾರಣ ಎನ್ನಬಹುದು. ಏಕೆಂದರೆ ವಿಮರ್ಶಾತ್ಮಕ ಬುದ್ಧಿಯ ಕೊರತೆ, ದುರ್ಬಲ ಮನಸ್ಸು, ಪೂರ್ವಾಗ್ರಹ, ಸಂಕುಚಿತ ಮನೋಭಾವ ಇವು ಕಾರಣವಾಗಿರುವುದು. ಅಜ್ಞಾನ, ಅಂಧಾನುಕರಣೆಗಳು ಜನರಲ್ಲಿ ತುಂಬಿಕೊಂಡಿವೆ. ಸಮಾಜದಲ್ಲಿರುವ ಈ ಭೀಕರ ಸಮಸ್ಯೆಗಳಿಗೆ ಪರಿಹಾರ ದೊರೆಯಬೇಕಾದರೆ ವ್ಯಕ್ತಿಯ ಮನೋಭಾವನೆ ಮತ್ತು ಮನಃಪ್ರವೃತ್ತಿಗಳು ಬದಲಾಗಬೇಕು; ಪ್ರಜ್ಞೆ ಜಾಗೃತಗೊಳ್ಳಬೇಕು. ಇದು ವ್ಯಕ್ತಿತ್ವ ವಿಕಸನದಿಂದ ಸಾಧ್ಯವಾಗುವುದು; ಇಲ್ಲಿ ಅಸಾಧ್ಯವಾದುದು ಯಾವುದೂ ಇಲ್ಲ.

**೪. ಆರ್ಥಿಕ ಪ್ರಗತಿ (Economic Development):**

ನಮ್ಮದು ಕೃಷಿ ಪ್ರಧಾನವಾದ ದೇಶ. ಇಲ್ಲಿ ಬೇಸಾಯದಲ್ಲಿ ಸುಧಾರಣೆ ತರಬೇಕು. ಸುಧಾರಣೆ ತರಬೇಕಾದರೆ ವ್ಯಕ್ತಿಗಳಲ್ಲಿ ವ್ಯಕ್ತಿತ್ವದ ಬೆಳವಣಿಗೆಯಾದರೆ ಅವರಲ್ಲಿ ತುಂಬಿರುವ ಅಜ್ಞಾನ, ಮೂಢನಂಬಿಕೆಗಳನ್ನು ಹೊಡೆದೋಡಿಸಿ ಪ್ರಗತಿಪಥದತ್ತ ಸಾಗಬಹುದಾಗಿದೆ. ಇದೇ ರೀತಿ ಔದ್ಯೋಗಿಕ ರಂಗದಲ್ಲಿಯೂ ಕಾರ್ಮಿಕರು, ಮಾಲೀಕರು ಮತ್ತು ಅಧಿಕಾರಿಗಳು ಉತ್ತಮ ವ್ಯಕ್ತಿತ್ವವನ್ನು ಬೆಳೆಸಿಕೊಂಡಾಗ ಉದ್ದಿಮೆ ವಲಯದ ಸರ್ವಾಂಗೀಣ ಪ್ರಗತಿ ಸಾಧ್ಯವಾಗುತ್ತದೆ.

**೫. ರಾಜಕೀಯ ಸುಭದ್ರತೆ (Political Security):** ಪ್ರಜಾಪ್ರಭುತ್ವ ರಾಷ್ಟ್ರದಲ್ಲಿ ಸಾರ್ವಜನಿಕ ಅಭಿಪ್ರಾಯಕ್ಕೆ ಹೆಚ್ಚಿನ ಮಹತ್ವವಿರುವುದರಿಂದ ನಾಯಕರನ್ನು ಅಧಿಕಾರಕ್ಕೆ ಆಯ್ಕೆ ಮಾಡುವಾಗ ಪ್ರಜೆಗಳಿಗೆ ಸರಿಯಾದ ಪ್ರಜ್ಞೆ ಇರಬೇಕು. ಅಜ್ಞಾನಿಗಳು, ನಿರಕ್ಷರಿಗಳಿರುವಲ್ಲಿ ದಕ್ಷ ನಾಯಕರು ಹೊರಹೊಮ್ಮುವುದಿಲ್ಲ. ಆಗ ಆಡಳಿತ ನಿಷ್ಕ್ರಿಯಗೊಳ್ಳುತ್ತದೆ. ಹಾಗಾಗಿ ಉತ್ತಮ ವ್ಯಕ್ತಿತ್ವದ ಬೆಳವಣಿಗೆ ಕೂಡ ರಾಜಕೀಯ ಭದ್ರತೆ, ಸುಗಮತೆ ಮತ್ತು ಪ್ರಗತಿಗೆ ಅತ್ಯಂತ ಮಹತ್ವದ ಸಂಗತಿಯಾಗುತ್ತದೆ.

**೬. ಶೈಕ್ಷಣಿಕ ಸುಧಾರಣೆ (Educational Improvement):** ಶಿಕ್ಷಣದ ಪಾತ್ರ ಒಬ್ಬ ವ್ಯಕ್ತಿಯ ವ್ಯಕ್ತಿತ್ವವನ್ನು ರೂಪಿಸುವಲ್ಲಿ ಪ್ರಮುಖವಾದುದಾಗಿದೆ. ಆದರೆ ಇಂದು ಶಿಕ್ಷಣರಂಗ ಎಂಬುದು ಸಮಸ್ಯೆಯ ಬೀಡಾಗಿದೆ. ಶಿಕ್ಷಕರು, ವಿದ್ಯಾರ್ಥಿಗಳು, ಪಾಲಕರು, ಸರಕಾರ ಇವುಗಳ ನಡುವಿನ ಸುಮಧುರ ಬಾಂಧವ್ಯ ಕಣ್ಮರೆಯಾಗುತ್ತಲಿದೆ. ಶಿಕ್ಷಣದ ಒಟ್ಟಾರೆ ಗುಣಮಟ್ಟ ಕುಸಿಯುತ್ತಿದೆ. ಇದಕ್ಕೆಲ್ಲಾ ಕಾರಣ ವ್ಯಕ್ತಿಗಳ ಮಾನಸಿಕ ಅಸ್ವಸ್ಥತೆ. ಸರಿಯಾದ ವ್ಯಕ್ತಿತ್ವದ ಬೆಳವಣಿಗೆಯಿಂದ ಈ ಸಮಸ್ಯೆಗಳನ್ನು ನಿವಾರಿಸಬಹುದಾಗಿದೆ. ಉತ್ತಮ ನಡೆನುಡಿ, ಪ್ರಾಮಾಣಿಕತೆ ಮತ್ತು ದಕ್ಷತೆಯ ವ್ಯಕ್ತಿತ್ವವಿರುವ ಜನರಿಂದ ರಾಷ್ಟ್ರದ ಸರ್ವಾಂಗೀಣ ಪ್ರಗತಿ ಸಾಧ್ಯ.

**೭. ಸಾಮಾಜಿಕ ಪ್ರಗತಿ (Social Progress):** ನಮ್ಮ ದೇಶದಲ್ಲಿ ವಿಪುಲವಾದ ನೈಸರ್ಗಿಕ ಸಂಪನ್ಮೂಲಗಳಿವೆ. ಅವುಗಳನ್ನು ಸದುಪಯೋಗಪಡಿಸಿಕೊಳ್ಳುವ ಜಾಣ್ಮೆ, ತಿಳುವಳಿಕೆಯ ಕೊರತೆಯಿದೆ. ಧರ್ಮಾಭಿಮಾನ, ಜಾತಿಮತಗಳ ಪ್ರಜ್ಞೆ, ಸಂಪ್ರದಾಯಪ್ರಿಯತೆ ಇವುಗಳು ಆರ್ಥಿಕ ಪ್ರಗತಿಗೆ ಅಡ್ಡಗಾಲಾಗಿ ಪರಿಣಮಿಸಿವೆ. ಇವುಗಳನ್ನು ಹೊಡೆದೋಡಿಸಲು ವ್ಯಕ್ತಿಗಳ ಮನಃಪ್ರವೃತ್ತಿ ಮತ್ತು ಮನೋಭಾವಗಳು ಬದಲಾಗಬೇಕಿದೆ. ಆ ದಿಕ್ಕಿನಲ್ಲಿ ಇಂದು ವ್ಯಕ್ತಿತ್ವದ ಬೆಳವಣಿಗೆಯಿಂದ ಪ್ರಗತಿ ಕಾಣುತ್ತಿದೆ. ಇಂದಿನ ಆಧುನಿಕ ಯುಗದಲ್ಲಿ ಅನೇಕ ತೆರನಾದ ಬದಲಾವಣೆಯ ಗಾಳಿ ಬೀಸಿದೆ. ಎಲ್ಲ ವಲಯಗಳಲ್ಲೂ ಕ್ರಾಂತಿಯಾಗಿದೆ. ಸ್ಪರ್ಧಾತ್ಮಕ ಮನೋಭಾವ ಹೆಚ್ಚುತ್ತಿದೆ. ಮೂಢನಂಬಿಕೆ, ಅಜ್ಞಾನ, ಅಂಧಾನುಕರಣೆ, ಸಂಕುಚಿತ ಭಾವನೆಗಳು ಕಣ್ಮರೆಯಾಗುತ್ತಿವೆ. ಪೂರ್ಣಪ್ರಮಾಣದಲ್ಲಿ ಅಲ್ಲವಾದರೂ, ಅಲ್ಪಪ್ರಮಾಣದಲ್ಲಿ ಬದಲಾವಣೆ ಆಗುತ್ತಿದೆ. ವ್ಯಕ್ತಿತ್ವದ ಬೆಳವಣಿಗೆಯಿಂದ ವೈಜ್ಞಾನಿಕ ಮನೋಭಾವನೆ, ವಿಮರ್ಶಾತ್ಮಕ ದೃಷ್ಟಿ, ಚಿಕಿತ್ಸಕ ಬುದ್ಧಿಗಳು ಬೆಳೆಯುತ್ತಿವೆ. ಇಂದಿನ ಸಾಮಾಜಿಕ ಬೆಳವಣಿಗೆಯನ್ನು ವ್ಯಕ್ತಿತ್ವದ ಬೆಳವಣಿಗೆಯ ಕೊಡುಗೆ ಎನ್ನಬಹುದಾಗಿದೆ.

**೮. ಕಲ್ಯಾಣ ರಾಜ್ಯದ ಗುರಿ (Destiny of Welfare State):** ವ್ಯಕ್ತಿಯ ಉತ್ತಮ ವ್ಯಕ್ತಿತ್ವದ ಬೆಳವಣಿಗೆಯಿಂದ ರಾಜ್ಯವನ್ನು



ಕಲ್ಯಾಣರಾಜ್ಯವನ್ನಾಗಿ ಮಾಡಬಹುದು. ಜನಸಾಮಾನ್ಯರ ಮನೋಭಾವನೆಗಳಿಗೆ ಸೂಕ್ತವಾಗಿ ಸ್ಪಂದಿಸಿದರೆ ಅದರಿಂದ ಮುನ್ನಡೆ ಸಾಧ್ಯ. ಮರ್ರೆ ಮತ್ತು ಕ್ಲಕೋಹ್ನ್ (Murray and Kluckhohn) ಅವರುಗಳು ವ್ಯಕ್ತಿತ್ವದ ಪ್ರಮುಖ ಲಕ್ಷಣಗಳನ್ನು ಈ ರೀತಿ ವಿವರಿಸುತ್ತಾರೆ:

೧. ಆಧುನಿಕ ವಿಜ್ಞಾನ ಮತ್ತು ತಂತ್ರಜ್ಞಾನದ – ಐಟಿ, ಕಂಪ್ಯೂಟರ್ ಇತ್ಯಾದಿ – ಪ್ರಗತಿಗೆ, ಬೆಳವಣಿಗೆಗೆ ಸಹಕಾರಿಯಾಗಿರುವುದು.

೨. ಜನರ ಭಾವನೆ ಹಾಗೂ ಚಿಂತನೆಗಳನ್ನು ಅರ್ಥಮಾಡಿ ಕೊಳ್ಳುವುದು.

೩. ಜನರ ಉದ್ವೇಗ ಹಾಗೂ ಮನೋವ್ಯಾಕುಲತೆಗಳ ನಿವಾರಣೆ.

೪. ದೂರದ ಗುರಿಗಳನ್ನು ಸಾಧಿಸಲು ಸಾಮಾಜಿಕ ಧೋರಣೆಗಳ ಚೌಕಟ್ಟನ್ನು ರೂಪಿಸುವುದು.

೫. ಅಗತ್ಯಗಳನ್ನು ಪೂರೈಸಿಕೊಳ್ಳುವಲ್ಲಿ ಎದುರಾಗುವ ಸಮಸ್ಯೆಗಳನ್ನು ನಿವಾರಣೆ ಮಾಡುವುದು.

೬. ಅನಾವಶ್ಯಕ ಉದ್ವೇಗ ಮತ್ತು ಮಾನಸಿಕ ಒತ್ತಡಗಳನ್ನು ನಿಯಂತ್ರಿಸಲು ಧ್ಯೇಯ, ಧೋರಣೆಗಳ ಪ್ರಮಾಣವನ್ನು ಸೀಮಿತಗೊಳಿಸುವುದು.

ಸಾಮಾಜಿಕ ನಿಯಮ ಮತ್ತು ವ್ಯಕ್ತಿಗಳ ಬಯಕೆಗಳ ಪೂರೈಕೆಯಲ್ಲಿ ಏಕರೂಪತೆಯನ್ನು ತರುವುದು.

ಒಟ್ಟಿನಲ್ಲಿ ವ್ಯಕ್ತಿತ್ವದ ಬೆಳವಣಿಗೆಯು ಸುಭದ್ರ ಸಾಮಾಜಿಕ ಬದುಕಿಗೆ, ರಾಜಕೀಯ ಭದ್ರತೆಗೆ, ಸಾಮಾಜಿಕ ಸಮಸ್ಯೆಗಳ ನಿವಾರಣೆಗೆ, ಸಂಬಂಧಗಳ ಸಾಮರಸ್ಯಕ್ಕೆ, ಸಾಂಸ್ಕೃತಿಕ ಅಭಿವೃದ್ಧಿಗೆ, ಅಂತಾರಾಷ್ಟ್ರೀಯ ಬೆಳವಣಿಗೆಗೆ, ಸಮೃದ್ಧ ರಾಜ್ಯದ ಗುರಿಯನ್ನು ತಲುಪುವುದಕ್ಕಾಗಿ, ವ್ಯಕ್ತಿಯ ಬದುಕನ್ನು ಸುಂದರ ಮತ್ತು ಅರ್ಥಪೂರ್ಣವಾಗಿ ಮಾಡುವುದರಲ್ಲಿ ಮಹತ್ವದ ಪಾತ್ರ ನಿರ್ವಹಿಸುತ್ತದೆಯೆಂದು ಹೇಳಬಹುದಾಗಿದೆ. ವ್ಯಕ್ತಿತ್ವದ ಬೆಳವಣಿಗೆಯು ವ್ಯಕ್ತಿಯು ತನ್ನ 'ಅಹಂ' ಅನ್ನು ಹೋಗಲಾಡಿಸಿಕೊಂಡು, ತನ್ನನ್ನು ತಾನು ಗುರುತಿಸಿಕೊಳ್ಳುವುದಕ್ಕೆ ಮಹತ್ವ ನೀಡುವುದು; ಉತ್ತಮ ನಾಗರಿಕರಾಗಲು ಅನುವು ಮಾಡಿಕೊಡುವುದು.


ಗ್ರಂಥಋಣ:–

**ವ್ಯಕ್ತಿತ್ವದ ನಿರ್ಮಾಣ**– *ಸ್ವಾಮಿ ವಿವೇಕಾನಂದ*

**ವ್ಯಕ್ತಿತ್ವ ವಿಕಸನ ಹಾಗೂ ಸಂವಹನ ಕೌಶಲಗಳು**–*ಡಾ.ವ್ಹಿ.ಎ.ಬೆನಕನಾಳ*

**ಶಿಕ್ಷಣದಲ್ಲಿ ವ್ಯಕ್ತಿತ್ವ ವಿಕಾಸ**–*ಅರವಿಂದ ಚೊಕ್ಕಾಡಿ*

**ವ್ಯಕ್ತಿತ್ವ ವಿಕಾಸ ಮತ್ತು ಸಂವಹನ**– *ಡಾ.ಎಸ್.ಬಿ. ಕೊಂಗವಾಡ*

**ವ್ಯಕ್ತಿತ್ವ ವಿಕಸನ ಕೈಪಿಡಿ**– *ರಾಮಕೃಷ್ಣ ನೈತಿಕ ಮತ್ತು ಆಧ್ಯಾತ್ಮಿಕ ಸಂಸ್ಥೆ*

**ವ್ಯಕ್ತಿತ್ವ ವಿಕಸನ–ವಾಸ್ತವ ಹಾಗೂ ಆದರ್ಶ**–*ಪ್ರೊ.ಎಂ.ಆರ್.ನಾಗರಾಜು*


# ದೈವೀ ಕೃಪೆ

ಆಗ ಸ್ವಾಮಿ ಬ್ರಹ್ಮಾನಂದರು ಬಲರಾಮ ಬಸುವಿನ ಮನೆಯಲ್ಲಿದ್ದರು. ಮಧ್ಯಾಹ್ನ ಊಟವಾದ ಮೇಲೆ ವಿಶ್ರಾಂತಿ ಪಡೆಯುತ್ತಿದ್ದರು. ಒಬ್ಬಾಕೆ ಹುಡುಗಿ ತನ್ನ ತಮ್ಮನೊಂದಿಗೆ ಅವರನ್ನು ನೋಡಲು ಬಂದಿದ್ದಳು; ನಾಲ್ಕು ಗಂಟೆಗೆ ಸ್ವಾಮಿ ಬ್ರಹ್ಮಾನಂದರನ್ನು ನೋಡಬಹುದೆಂದು ಅಲ್ಲಿದ್ದವರು ಹೇಳಿದರು. ಆದರೆ ಆಕೆ ಮತ್ತೆ ಮತ್ತೆ ಕೇಳಿಕೊಂಡದ್ದರಿಂದ ಸ್ವಾಮೀಜಿ ಅವಳನ್ನು ತನ್ನ ಬಳಿಗೆ ಕಳುಹಿಸಲು ಹೇಳಿದರು. ಅವಳು ಸ್ವಾಮೀಜಿಯವರನ್ನು ಕಂಡೊಡನೆ ಬಿಕ್ಕಿ ಬಿಕ್ಕಿ ಅಳತೊಡಗಿದಳು. ಶ್ರೀರಾಮಕೃಷ್ಣರ ಭಾವಚಿತ್ರದ ಕಡೆಗೆ ತೋರಿಸಿ, "ಅವರೇ ನಿಮ್ಮ ಬಳಿಗೆ ಹೋಗುವಂತೆ ತಿಳಿಸಿದರು" ಎಂದಳು. ಸ್ವಾಮಿ ಬ್ರಹ್ಮಾನಂದರು ಆಕೆಗೆ ಅನುಕಂಪದಿಂದ, "ಮಗೂ, ಏನಾಯಿತು? ವಿವರವಾಗಿ ತಿಳಿಸಮ್ಮಾ" ಎಂದರು.



ಆಕೆ ಅವರಿಗೆ ತನ್ನ ಕಥೆಯನ್ನು ಹೀಗೆ ವಿವರಿಸಿದಳು: ಆಕೆಗೆ ಹದಿನಾಲ್ಕನೇ ವಯಸ್ಸಿಗೆ ವಿವಾಹವಾಗಿತ್ತು. ಮದುವೆಯಾಗಿ ಎರಡು ವಾರಗಳಲ್ಲೇ ಅವಳ ಗಂಡ ತೀರಿಕೊಂಡ. ದುಃಖತಪ್ತಳಾದ ಅವಳು ಉಕ್ಕಿ ಬರುವ ದುಃಖವನ್ನು ತಡೆಯಲಾಗದೆ ಹೃದಯದ ಆಳದಿಂದ ಪ್ರಾರ್ಥಿಸಿದಳು, 'ದೇವರೇ, ನನ್ನ ಗತಿಯೇನು? ನನಗೆ ಯಾರೂ ದಿಕ್ಕಿಲ್ಲ, ನನ್ನನ್ನು ಕಾಪಾಡುವವರು ಯಾರು? ನಾನೇನು ಮಾಡಲಿ, ಎಲ್ಲಿಗೆ ಹೋಗಲಿ? ದಯವಿಟ್ಟು ನನಗೆ ದಾರಿ ತೋರು.' ಸುಮಾರು ಒಂದು ವರ್ಷದ ನಂತರ ಒಂದು ರಾತ್ರಿ ಶ್ರೀರಾಮಕೃಷ್ಣರು ಅವಳಿಗೆ ಕನಸಿನಲ್ಲಿ ಕಾಣಿಸಿಕೊಂಡು, " ಮಗೂ, ಅಳಬೇಡ. ನನ್ನ ಮಗ ರಾಖಾಲ ಬಾಗ್‌ಬಜಾರಿನಲ್ಲಿದ್ದಾನೆ. ಅವನ ಬಳಿಗೆ ಹೋಗು. ಅವನು ನಿನ್ನ ನೆರವಿಗೆ ಬರುತ್ತಾನೆ". ಅವಳು ಶ್ರೀರಾಮಕೃಷ್ಣರು ಅಥವಾ ರಾಖಾಲ್ ಇವರ ಹೆಸರನ್ನೇ ಕೇಳಿರಲಿಲ್ಲ. ಅವಳು ತನ್ನ ತಾಯಿಯ ಮೂಲಕ ಬೇಲೂರು ಮಠದಲ್ಲಿ ವಿಚಾರಿಸಿ ತಿಳಿದು, ಸ್ವಾಮಿ ಬ್ರಹ್ಮಾನಂದರ ಬಳಿಗೆ ಬಂದಿದ್ದಳು. ಅವರ ಬಳಿ ಆಕೆ ಎರಡು ಗಂಟೆ ಕಾಲ ಕಳೆದಳು. ಸ್ವಾಮೀಜಿ ಅವಳಿಗೆ ಮಂತ್ರದೀಕ್ಷೆ ನೀಡದರು. ಮುಂದೆ ಅವಳು ಸಂನ್ಯಾಸಿನಿಯಾಗಿ ಒಂದು ಆಶ್ರಮವನ್ನು ಸ್ಥಾಪಿಸಿದಳು.

("Sri Ramakrishna Saves" ಗ್ರಂಥದಿಂದ, ಪು.೬೦)



# ಜೀವನ ಮಕರಂದ

('ಬದುಕಲು ಕಲಿಯಿರಿ' ಪುಸ್ತಕದ ಸಂಗ್ರಹ)

ಮೂಲ ಲೇಖಕರು : ಸ್ವಾಮಿ ಜಗದಾತ್ಮಾನಂದ   ಸಂಗ್ರಹ : ಡಾ. ಜಿ.ವಿ. ಕುಲಕರ್ಣಿ

ಅಧ್ಯಾಯ ನಾಲ್ಕು

## ಪ್ರೀತಿಯ ಪ್ರಚಂಡ ಪ್ರಭಾವ

**"ಜಗತ್ತೇ ಪರಿಶುದ್ಧ ಪ್ರೀತಿಗಾಗಿ ಆತುರದಿಂದ ಹಾತೊರೆಯುತ್ತಿದೆ. ಪ್ರತಿಫಲವನ್ನಪೇಕ್ಷಿಸದೆಯೇ ನಾವದನ್ನು ಹಂಚಬೇಕು. ಪ್ರೀತಿಗೆ ಎಂದಿಗೂ ಅಪಜಯವಿಲ್ಲ. ಇಂದೋ, ನಾಳೆಯೋ, ಶತಮಾನಗಳ ನಂತರವೋ ಸತ್ಯ ಮಾತ್ರವೇ ಜಯಿಸುವುದು. ಪ್ರೀತಿಯು ಜಯವನ್ನು ತಂದೇ ತರುವುದು. ನೀವು ನಿಮ್ಮ ಸಹೋದರರನ್ನು ಪ್ರೀತಿಸುವಿರೇನು? ಪ್ರೀತಿಯ ಸರ್ವಶಕ್ತತೆಯಲ್ಲಿ ನಂಬಿಕೆ ಇಡಿ. ನಿಮ್ಮಲ್ಲಿ ಪರಿಶುದ್ಧ ಪ್ರೀತಿ ಇದೆಯೆಂದಾದರೆ ನೀವೇ ಸರ್ವಶಕ್ತರು."** **–ವಿವೇಕಾನಂದ**

**"ಪರಿಶುದ್ಧ ಪರಿಪೂರ್ಣ ಪ್ರೀತಿಯು ಭೀತಿಯನ್ನು ದೂರಕ್ಕೆಸೆಯುವುದು"** **– ಏಸುಕ್ರಿಸ್ತ**

**"ಪರಿಶುದ್ಧ ನಿಃಸ್ವಾರ್ಥ ಪ್ರೀತಿ ಒಂದು ದೈವೀ ಶಕ್ತಿ. ಶ್ರದ್ಧೆ, ಭರವಸೆ ಮತ್ತು ಪ್ರೀತಿ ಇವುಗಳಲ್ಲಿ ಪ್ರೀತಿಯೇ ಅತ್ಯಂತ ಮಹಿಮಾನ್ವಿತವಾದುದು."** **–ಸಂತ ಪೌಲ್**

ಶೈಶವ, ಬಾಲ್ಯಗಳಲ್ಲಿ ತಂದೆತಾಯಂದಿರ ಪರಿಶುದ್ಧ ಪ್ರೀತಿಯನ್ನು ಕಂಡರಿಯದ ಮಕ್ಕಳು ದುಷ್ಟರೂ, ಭ್ರಷ್ಟರೂ, ಕ್ರೂರಿಗಳೂ ಆಗುತ್ತಾರೆ ಎಂಬುದು ತಜ್ಞರ ಅಭಿಪ್ರಾಯ.

ಸುರಕ್ಷಿತ ದಂಪತಿಗಳ ರೋಚಕ ಕತೆಯೊಂದಿದೆ. ಇಬ್ಬರೂ ಒಂದೇ ಕಾಲೇಜಿನಲ್ಲಿ ಪ್ರಾಧ್ಯಾಪಕರು. ಇಬ್ಬರಲ್ಲಿ ಮತಭೇದವಿತ್ತು. ಒಮ್ಮೆ ಅವರಲ್ಲಿ ವಾಗ್ಯುದ್ಧ ವಿಕೋಪಕ್ಕೆ ಹೋದಾಗ ಗಂಡ ಹೆಂಡತಿಯ ಕೆನ್ನೆಗೆ ಬಾರಿಸಿದ. ಅವಳು ಕುಪಿತಳಾಗಿ ತವರಿಗೆ ತೆರಳಿದಳು. ಕೆಲವು ಕಾಲದ ನಂತರ ಗಂಡನಿಗೆ ವಿಪರೀತ ವಿಷಮಜ್ವರದ ಬಾಧೆಯಾಗಿ ಹಾಸಿಗೆ ಹಿಡಿದಿದ್ದಾನೆಂಬ ಸುದ್ದಿ ಅವಳಿಗೆ ಬಂತು. ಏನು ಮಾಡುವುದು ಎಂದಾಕೆಗೆ ತಿಳಿಯದಾಯಿತು. ಅವಳು ಶ್ರೀ ಬ್ರಹ್ಮಚೈತನ್ಯ ಮಹಾರಾಜರನ್ನು ಕಂಡಳು. 'ಸ್ತ್ರೀ ಹಾಗೂ ಪುರುಷರು ಒಂದು ರಥದ ಎರಡು ಚಕ್ರಗಳಿದ್ದಂತೆ. ಎರಡೂ ಒಂದೇ ದಿಕ್ಕಿನೆಡೆ ನಡೆಯಬೇಕು. ಎರಡೂ ಬೇರೆ ಬೇರೆ ದಿಕ್ಕಿನೆಡೆ ಎಳೆದಾಡಿದರೆ ರಥಕ್ಕೆ ದುರ್ದೆಶೆ ಯಾಗುತ್ತದೆ. ಪ್ರಪಂಚವೇ ಒಂದು ಆಟ. ಅದರಲ್ಲಿ ಭೇದ ಸ್ವಾಭಾವಿಕ. ಪುರುಷ ಶೌರ್ಯ ಹಾಗೂ ಔದಾರ್ಯದ ಮೂರ್ತಿಯಾಗಬೇಕು. ಸ್ತ್ರೀಯಲ್ಲಿ ಸಹನೆ ಮತ್ತು ಅನನ್ಯ ಶರಣಾಗತಿಗಳು ಮೈದಾಳಬೇಕು. ಸಂಸಾರದಲ್ಲಿ ಸೋಲುವುದು ಸ್ತ್ರೀಯ ಸಹನಶೀಲತೆಯ ಪರೀಕ್ಷೆ. ಜಗತ್ತು ಒಂದು ನಾಟಕ. ನಿಮ್ಮ ಪಾತ್ರವನ್ನು ನೀವು ಸರಿಯಾಗಿ ನಿಭಾಯಿಸಬೇಕು' ಎಂದು ಮುಂತಾಗಿ ಬೋಧಿಸಿದರು. 'ಗುರುಗಳೇ, ಈಗ ನಾನೇನು ಮಾಡಲಿ ಹೇಳಿರಿ?' ಎಂದವಳು ಪ್ರಶ್ನಿಸಿದಾಗ ಗುರುಗಳು, "ಮೊದಲ ಗಾಡಿ ಹಿಡಿದು ನೀನು ನಿಮ್ಮ ಯಜಮಾನರಿರುವಲ್ಲಿಗೆ ಹೋಗು. ಹಿಂದೆ ಏನೂ ನಡೆದಿಲ್ಲವೆನ್ನುವಂತೆ ಭಾವಿಸಿ ಅವರ ಶುಶ್ರೂಷೆ ಮಾಡು. ಪ್ರತಿದಿನ ಬೆಳಿಗ್ಗೆ ಅವರಿಗೆ ನಮಸ್ಕರಿಸು" ಎಂದರು. ಪತಿಯ ಕಾಯಿಲೆ ಗುಣಮುಖವಾಯಿತು. ಇವಳು ಅವರ ಸೇವೆ ಮಾಡಿದಳು. ಅವಳು ನಮಸ್ಕರಿಸುವಾಗ ಅವರಿಗೆ ಅಳುವೇ ಬಂತು. ಬಹಳ ಪಶ್ಚಾತ್ತಾಪವಾಗಿತ್ತು. ನಿನ್ನ ಬದಲಾವಣೆ ಕಂಡರೆ ಯಾರೋ ಮಹಾತ್ಮರು ನಿನಗೆ ಹೀಗೆ ವರ್ತಿಸಲು ಹೇಳಿರಬೇಕು. ಇನ್ನು ಮುಂದೆ ನನ್ನಿಂದ ಇಂಥ ತಪ್ಪು ಆಗದು ಎಂದು ವಚನ ಕೊಡುತ್ತೇನೆ ಎಂದನಂತೆ ಪತಿ. ಅನಂತರ ಅವರಿಗೆ ಒಂದು ಗಂಡು ಮಗುವಾಯಿತು. ಇಬ್ಬರೂ ಸಂತರ ದರುಶನ ಪಡೆದು ಕೃತಕೃತ್ಯರಾದರು.

ಅಮೆರಿಕೆಯ ಬಾಲ್ಟಿಮೋರ್‌ನಲ್ಲಿಯ ಸಮಾಜಶಾಸ್ತ್ರದ ಪ್ರಾಧ್ಯಾಪಕರೊಬ್ಬರು ತಮ್ಮ ವಿದ್ಯಾರ್ಥಿಗಳಿಗೆ ಕೊಳಚೆ ಪ್ರದೇಶದಲ್ಲಿ ವಾಸಿಸುವ ಎಳೆಯ ಮಕ್ಕಳನ್ನು ಕುರಿತು ಅಭ್ಯಾಸ ಮಾಡಲು ಹೇಳಿದರಂತೆ. ಅವರುಗಳು ೨೦೦ ಎಳೆಯರನ್ನು ಸಂದರ್ಶಿಸಿ ಮಾಹಿತಿ ಕಲೆಹಾಕಿದರಂತೆ. ಮಕ್ಕಳು ವಾಸಿಸುತ್ತಿದ್ದ ವಾತಾವರಣ ಭಯಾನಕವಾಗಿತ್ತು, ಅಸಹ್ಯವಾಗಿತ್ತು. ಅವರಲ್ಲಿ ಶೇಕಡಾ ೯೦ರಷ್ಟು ಮಕ್ಕಳು ದುಷ್ಟರಾಗಿ ಬೆಳೆದು ಜೈಲುವಾಸ ಮಾಡುವರೆಂದು ಭವಿಷ್ಯ ನುಡಿಯಲಾಗಿತ್ತು. ಇಪ್ಪತ್ತೈದು ವರ್ಷಗಳ ನಂತರ ಅದೇ ಪ್ರಾಧ್ಯಾಪಕರು ತಮ್ಮ ವಿದ್ಯಾರ್ಥಿಗಳ ಇನ್ನೊಂದು ತಂಡವನ್ನು ಆ ಕೊಳಚೆ ಪ್ರದೇಶಕ್ಕೆ ಕಳಿಸಿದರು. ಹಿಂದೆ ತಮ್ಮ ವಿದ್ಯಾರ್ಥಿಗಳು ಮಾಡಿದ ಅಭ್ಯಾಸದ ಪರಿಣಾಮ ಗಳನ್ನು ನೋಡಲು ಅವರು ಉತ್ಸುಕರಾಗಿದ್ದರು. ಹಿಂದೆ ಸಂಪರ್ಕಿಸಿದ ಎಳೆಯರೀಗ ದೊಡ್ಡವರಾಗಿದ್ದರು. ಅವರಲ್ಲಿ ೯೦ ಜನರನ್ನು ಸಂಪರ್ಕಿಸಲು ಸಾಧ್ಯವಾಗಿತ್ತು. ಹಿಂದಿನವರು ನುಡಿದ ಭವಿಷ್ಯ ಸುಳ್ಳಾಗಿತ್ತು. ಅವರೆಲ್ಲರೂ ಸಭ್ಯ ನಾಗರಿಕರಾಗಿದ್ದರು. ಇವರ ಪರಿವರ್ತನೆಯ ಗುಟ್ಟೇನು?

ಹೊಸ ಅಧ್ಯಯನದಿಂದ ತಿಳಿದ ವಿಷಯ ಹೀಗಿತ್ತು: ಆ ಕೊಳಚೆ ಪ್ರದೇಶದಲ್ಲಿದ್ದ ಶಾಲೆಯಲ್ಲಿ ಶೀಲಾ ರೂರ್ಕೆ

ಎಂಬ ಅಧ್ಯಾಪಕಿಯಿದ್ದಳು. ಮಕ್ಕಳ ಮೇಲೆ ಅವಳ ಪ್ರಭಾವ ಬಹಳ ಆಗಿತ್ತು ಎಂಬುದು ಕಂಡುಬಂತು. ಆ ಅಧ್ಯಾಪಕಿ ನಿವೃತ್ತಳಾಗಿ ಬಹಳ ವರ್ಷವಾಗಿತ್ತು. ಈ ಅಧ್ಯಾಪಕರು ಅವಳನ್ನು ಹುಡುಕಲು ತೊಡಗಿದರು. ಅವಳನ್ನು ಕಂಡು ಅವಳ ಸಂದರ್ಶನ ಪಡೆದರು. 'ಈ ಕೊಳಚೆ ಪ್ರದೇಶದ ಮಕ್ಕಳಿಗೆ ನೀವು ಹೇಗೆ ಸ್ಫೂರ್ತಿ ನೀಡಿದಿರಿ? ನಿಮ್ಮ ಯಾವ ಉಪಾಯದಿಂದ ಇವರೆಲ್ಲ ಸಭ್ಯ ನಾಗರಿಕರಾದರು?' ಎಂದು ಕೇಳಿದಾಗ ಆಕೆ ವಿನಮ್ರಳಾಗಿ ಉತ್ತರಿಸಿದಳಂತೆ, 'ನನಗೆ ಯಾವ ಉಪಾಯವೂ ಗೊತ್ತಿಲ್ಲ. ನಾನು ಆ ಶಾಲೆಯ ಅಧ್ಯಾಪಕಿಯಾಗಿರುವಷ್ಟು ಕಾಲ ಪ್ರತಿಯೊಬ್ಬ ವಿದ್ಯಾರ್ಥಿಯನ್ನೂ ಅತ್ಯಂತ ಪ್ರೀತಿಯಿಂದ ನೋಡಿಕೊಂಡೆ' ಎಂದು.

'ಪ್ರೀತಿ ಪರಿವರ್ತನೆಗೆ ಪ್ರೇರಕವಾಗಬಲ್ಲದು. ಪ್ರೀತಿ ಪಡೆದವನೇ ಪ್ರೀತಿಯ ಮಹಿಮೆ ತಿಳಿಯಬಲ್ಲ. ಆತನೇ ಪ್ರೀತಿಯನ್ನು ಇತರರಿಗೆ ನೀಡಬಲ್ಲ.'

"ಜನರೇನೋ ಪ್ರೀತಿಸುವುದು ಅತ್ಯಂತ ಸುಲಭ ಕಾರ್ಯವೆಂದು ನಂಬಿದ್ದಾರೆ. ಪ್ರತಿಯೊಬ್ಬ ವ್ಯಕ್ತಿಯಲ್ಲಿ ಪ್ರೀತಿಸುವ ಸಾಮರ್ಥ್ಯವಿದ್ದರೂ ನಿಜವಾಗಿ ಪ್ರೀತಿಸುವುದು ಒಂದು ಅಸಾಮಾನ್ಯ ಸಿದ್ಧಿಯೇ ಸರಿ" ಎಂದು ಎರಿಕ್ ಫ್ರಾಂ ಹೇಳುತ್ತಾರೆ.

'ಪ್ರೀತಿ ಎಂದರೆ ಕೇವಲ ಭಾವಪರವಶತೆ, ಗಂಡು ಹೆಣ್ಣುಗಳ ದೈಹಿಕ ಆಕರ್ಷಣೆ ಎಂದು ಹೆಚ್ಚಿನವರು ತಿಳಿದುಕೊಂಡಿದ್ದಾರೆ. ಕಾಮ ಮತ್ತು ಸೌಂದರ್ಯ ಭಾವನೆಗಳ ಮಿಶ್ರಣದಿಂದ ಬಿಡಿಸಿ, ಪ್ರೀತಿಯ ಸ್ವರೂಪವನ್ನು ತಿಳಿದುಕೊಳ್ಳಲು ನಾವು ಯತ್ನಿಸಬೇಕು' ಎನ್ನುತ್ತಾರೆ ಲೇಖಕರು.

ಸ್ವಾರ್ಥರಹಿತವಾದ ಪರಿಶುದ್ಧ ಪ್ರೀತಿಯಲ್ಲಿ ಅಪಾರ ಶಕ್ತಿಯಿದೆ. ಪ್ರೀತಿಯಿಂದ ವಂಚಿತರಾದ ಎಳೆಯ ಮಕ್ಕಳು ಸಮಾಜದಲ್ಲಿ ನೈತಿಕವಾಗಿ, ಸಾಮಾಜಿಕವಾಗಿ ಹಿಂದುಳಿಯುತ್ತವೆ. ಕುಡಿತದ ಚಟ, ಅಪರಾಧ ಹಾಗೂ ಆತ್ಮಹತ್ಯೆಯ ಪ್ರವೃತ್ತಿಗಳನ್ನು ತಡೆಗಟ್ಟಲು ಪ್ರೀತಿಯೆಂಬುದೇ ಅತ್ಯಂತ ಪರಿಣಾಮಕಾರಿ ದಿವ್ಯೌಷಧಿಯಾಗಿದೆ. ಅದು ದ್ವೇಷ, ಭಯ ಹಾಗೂ ನರ ದೌರ್ಬಲ್ಯ ಮೊದಲಾದ ತೊಂದರೆಗಳನ್ನು ದೂರ ಮಾಡುವ ಸಾಮರ್ಥ್ಯವನ್ನು ಹೊಂದಿದೆ.

ಮಕ್ಕಳ ಸರಿಯಾದ ಬೆಳವಣಿಗೆಗೆ ತಾಯಿಯ ಪ್ರೀತಿ ವಾತ್ಸಲ್ಯಗಳು ಅತ್ಯಂತ ಆವಶ್ಯಕ ಎಂಬುದು ಅನುಭವ ಹಾಗೂ ಸಂಶೋಧನೆಗಳ ಮೂಲಕ ಸಾಬೀತಾಗಿದೆ. 'ಸಾಂಕ್ರಾಮಿಕ ರೋಗದಿಂದ, ಹಸಿವೆಯಿಂದ, ಅಯೋಗ್ಯ ಆಹಾರದಿಂದ ಮಕ್ಕಳು ದುರ್ಬಲವಾಗಿ ಸಾಯುವಂತೆ, ತಾಯಿಯ ಒಲವನ್ನೇ ಕಂಡರಿಯದ ಮಕ್ಕಳು ಬಹು ಬೇಗನೆ ರೋಗಿಷ್ಠರೂ, ದುರ್ಬಲರೂ ಆಗಿ ಸಾಯುತ್ತಾರೆ' ಎಂದು ಈ ಕ್ಷೇತ್ರದಲ್ಲಿ ಸಂಶೋಧನೆ ನಡೆಸಿದ ಡಾ। ರೀನೆ ಎ ಸ್ಪಿಟ್ಜ್ ಹೇಳುತ್ತಾರೆ.

'ನಾನು ಯಾರಿಗೂ ಬೇಡವಾದವನು' ಎಂಬ ಭಾವನೆಯೇ ಬಹಳ ಕೆಟ್ಟದಾದ ರೋಗ. 'ಕುಷ್ಠರೋಗಕ್ಕೆ ನಾವು ಔಷಧಿ ಕಂಡುಹಿಡಿದಿದ್ದೇವೆ, ಕ್ಷಯರೋಗಕ್ಕೆ ಔಷಧಿ ಇದೆ, ಆದರೆ ಪ್ರೀತಿಯನ್ನು ಕಂಡರಿಯದ ಈ ಕೆಟ್ಟ ರೋಗಕ್ಕೆ ಔಷಧಿ ಎಲ್ಲಿದೆ? ಹೃದಯದಲ್ಲಿ ಪ್ರೀತಿಯನ್ನು ತುಂಬಿಕೊಂಡು, ಕೈಗಳಿಂದ ಸೇವೆ ಮಾಡಲು ಸಿದ್ಧರಾದ ವ್ಯಕ್ತಿಗಳಿಂದ ಮಾತ್ರವೇ ಈ ಕೆಟ್ಟ ರೋಗವನ್ನು ದೂರಮಾಡಲು ಸಾಧ್ಯ' ಎಂದು ಮದರ್ ಥೇರೇಸಾ ಹೇಳಿದ್ದಾರೆ.

'ಜಗತ್ತೇ ಪರಿಶುದ್ಧ ಪ್ರೀತಿಗಾಗಿ ಆತುರದಿಂದ ಹಾತೊರೆಯುತ್ತಿದೆ. ಪ್ರತಿಫಲವನ್ನು ಅಪೇಕ್ಷಿಸದೆ ನಾವು ಅದನ್ನು ಹಂಚಬೇಕು' ಎಂದವರು ಸ್ವಾಮಿ ವಿವೇಕಾನಂದರು.

ವಿಜ್ಞಾನಿಗಳು ತಮ್ಮ ಸಂಶೋಧನೆಯಿಂದ ಜಗತ್ತಿನ ಮುಖವನ್ನೇ ಬದಲಿಸಿದ್ದಾರೆ. 'ಇದೀಗ ಮುಖ್ಯವಾಗಿ ಹಿಂಸೆ, ಯುದ್ಧ, ರಕ್ತಪಾತ, ಕೊಲೆಗಡುಕತನ ಇವುಗಳನ್ನು ದೂರಮಾಡಲು, ಮತ್ತು ನಿಸ್ವಾರ್ಥ ಪ್ರೀತಿಯ ಶಕ್ತಿಯನ್ನು ಕುರಿತು, ಸಂಶೋಧನೆ ನಡೆಸಬೇಕಾಗಿದೆ' ಎಂದು ಸೊರೊಕಿನ್ ಅಭಿಪ್ರಯಪಡುತ್ತಾರೆ.

ಮನೋದೈಹಿಕ ಬೇನೆಗಳನ್ನು ಕುರಿತ ಸಂಶೋಧನೆಗಳಿಂದ ಗೊತ್ತಾಗಿರುವ ತಥ್ಯಾಂಶಗಳು ಇಂತಿವೆ: 'ದ್ವೇಷ ಕೆಟ್ಟದ್ದು, ಪ್ರೀತಿ ಒಳ್ಳೆಯದು. ದ್ವೇಷ, ಮತ್ಸರ, ದುರಭಿಮಾನ, ಚಿಂತೆ, ಸೇಡಿನ ಮನೋಭಾವ ಇವು ಶರೀರಾರೋಗ್ಯಕ್ಕೆ ತೀವ್ರ ಕೆಡಕು ಉಂಟುಮಾಡುವ ವಿಷಯಗಳು. ಪ್ರೀತಿ ಶರೀರದ ಆರೋಗ್ಯಕ್ಕೆ ಅಷ್ಟೇ ಅಲ್ಲ, ಮಾನಸಿಕ ಹಾಗೂ ನೈತಿಕ ಸುಸ್ಥಿತಿಗೂ ಆವಶ್ಯಕವಾಗಿದೆ.'

ಕರ್ಮಯೋಗವನ್ನು ಕುರಿತು ವ್ಯಾಖ್ಯಾನಿಸುವಾಗ ಸ್ವಾಮಿ ವಿವೇಕಾನಂದರು, 'ನಿಃಸ್ವಾರ್ಥತೆಯೇ ದೇವರು' ಎನ್ನುತ್ತಾರೆ. ನಿಃಸ್ವಾರ್ಥತೆಯಲ್ಲಿರುವ ಗುಣ ಮನುಷ್ಯನನ್ನು ದೈವತ್ವಕ್ಕೆ ಏರಿಸಬಲ್ಲದು ಎಂಬುದು ಈ ಮಾತಿನ ಅರ್ಥ. ನಿಃಸ್ವಾರ್ಥ ಪ್ರೀತಿಗೆ ತಾಯಿಗಿಂತ ಬೇರೆಯ ಮಾದರಿ ಸಿಗಲಾರದು. ಆದ್ದರಿಂದಲೇ ತಾಯಿಯೇ ದೇವರು, 'ಮಾತೃದೇವೋ ಭವ' ಎಂದು ಋಷಿಮುನಿಗಳು ಕರೆದಿರಬೇಕು.

ಪ್ರೀತಿ ಎಷ್ಟರಮಟ್ಟಿಗೆ ಪರಿಶುದ್ಧವಾಗಿದೆ ಎಂಬುದನ್ನು ತಿಳಿಯಲು ನಿಃಸ್ವಾರ್ಥತೆಯೇ ಒರೆಗಲ್ಲು. ಆದರೆ ಇಂದಿನ ಸ್ತ್ರೀಸ್ವಾತಂತ್ರ್ಯ ತಾಯ್ತನಕ್ಕೆ ಮಾರಕವಾಗುತ್ತಿದೆ.

ಶ್ರೀರಾಮಕೃಷ್ಣರಲ್ಲಿ ಕಂಡುಬರುತ್ತಿದ್ದ ಅನೇಕ ಗುಣಗಳಲ್ಲಿ ತುಂಬ ಆಕರ್ಷಕವಾದ ಗುಣವೆಂದರೆ ಅವರು ತೋರುತ್ತಿದ್ದ ಪ್ರೀತಿ ಹಾಗೂ ವಾತ್ಸಲ್ಯ. ಪ್ರತಿಯೊಬ್ಬರ ಹಿತಚಿಂತನೆಯಲ್ಲಿ ಅವರಿಗೆ ಆಸಕ್ತಿ ಇರುತ್ತಿತ್ತು. ಮಾತೃತ್ವದ ಸಾಕಾರಮೂರ್ತಿಯಾದ ಶ್ರೀಶಾರದಾದೇವಿಯವರ ಬಗ್ಗೆ ಸೋದರಿ ನಿವೇದಿತಾ ಬರೆಯುತ್ತ, 'ಮೇರೆಯಿಲ್ಲದ ವಾತ್ಸಲ್ಯವಾರಿಧಿ' ಎಂದು ಅವರ ಗುಣಗಾನ ಮಾಡುತ್ತಾರೆ.

ವಿಜ್ಞಾನದ ಪ್ರಗತಿಯಿಂದ ಮಾನವಕುಲಕ್ಕೆ ಲಾಭಕ್ಕಿಂತ ಹಾನಿಯೇ ಹೆಚ್ಚಾಗಿದೆ. ಸುಖಲೋಲುಪತೆ ಮತ್ತು ಸ್ವೇಚ್ಛಾಚಾರಕ್ಕಿಳಿಸಿದ ಸ್ವಾತಂತ್ರ್ಯಕ್ಕೆ ವಿಜ್ಞಾನ ಸಹಕಾರಿಯಾಗಿದೆ. ವಿಯೆಟ್ನಾಂ ಯುದ್ಧದಲ್ಲಿ ೪೫ ಸಾವಿರ ಸೈನಿಕರು ಸತ್ತಿದ್ದರೆ ಮಾದಕ ದ್ರವ್ಯ ಸೇವಿಸಿ ಲಕ್ಷಾಂತರ ಯುವಕರು ಸಾಯುತ್ತಿದ್ದಾರೆ. ಜಗತ್ತಿನಲ್ಲಿ ಮಾದಕದ್ರವ್ಯ ವ್ಯಾಪಾರದ ಪ್ರಮುಖ ಸಂಸ್ಥೆಗಳು ಹದಿಮೂರು ಇವೆ. ಇವುಗಳಲ್ಲಿ ಒಂದು ಕಳ್ಳವ್ಯಾಪಾರ ಸಂಸ್ಥೆಯ ವರುಷದ ವ್ಯಾಪಾರ ಎರಡು ಸಾವಿರ ಕೋಟಿ ರೂಪಾಯಿಯನ್ನು ಮೀರಿದೆಯಂತೆ.

ಇಂದಿನ ದಿನಗಳಲ್ಲಿ ನೈತಿಕತೆಯ ಅಧಃಪತನವಾಗಿದೆ. 'ಕಳೆದ ಇನ್ನೂರು ವರುಷಗಳಿಂದ, ಮುಖ್ಯವಾಗಿ ಕಳೆದ ಹಲವು ದಶಕಗಳಿಂದ, ನಮ್ಮ ಸಂಸ್ಕೃತಿಯ ಎಲ್ಲ ವಿಭಾಗಗಳೂ ಅತಿಲೈಂಗಿಕತೆಯ ದಾಳಿಗೊಳಗಾಗಿವೆ. ನಮ್ಮ ನಾಗರಿಕತೆ ಎಷ್ಟು ಲೈಂಗಿಕತೆಯಲ್ಲಿ ಮುಳುಗಿದೆ ಎಂದರೆ ಬದುಕಿನ ಎಲ್ಲೆಡೆಗಳಿಂದಲೂ ಅದು ಇಂದು ಹೊರಹೊಮ್ಮುತ್ತಿದೆ' ಎನ್ನುತ್ತಾರೆ ಸಮಾಜಶಾಸ್ತ್ರಜ್ಞ ಸೊರೊಕಿನ್. ಸಾಹಿತ್ಯ, ಕಥೆ ಕಾದಂಬರಿ, ಚಿತ್ರ, ಸಂಗೀತ, ಚಲನಚಿತ್ರ, ಟೆಲಿವಿಜನ್, ಪತ್ರಿಕೆ, ಮ್ಯಾಗಜಿನ್, ಜಾಹೀರಾತು– ಈ ಎಲ್ಲ ಕ್ಷೇತ್ರದಲ್ಲಿ ಲೈಂಗಿಕತೆಯ ಹಾವಳಿ ಹೇಗೆ ನಡೆದಿದೆ ಎಂಬುದನ್ನು ಸಾಕ್ಷ್ಯಾಧಾರ ಸಮೇತವಾಗಿ ಅವರು ಅಧ್ಯಯನ ನಡೆಸುತ್ತಾರೆ.

ಭೋಗ, ಸ್ವಾರ್ಥಗಳೇ ವೈವಾಹಿಕ ಜೀವನದ ಉದ್ದೇಶವಾದರೆ ಘರ್ಷಣೆಯನ್ನು ತಡೆಯುವುದೆಂತು? ಮಕ್ಕಳಿಗೆ ಮೊಲೆಹಾಲು ಕುಡಿಸುವುದು ತನ್ನ ಶರೀರ ಸೌಷ್ಠವಕ್ಕೆ ಕುಂದು ಎಂಬ ತಾಯಿ ಮಗುವಿಗೆ ಜನ್ಮಕೊಡುವುದು ತನ್ನ ಸ್ವಚ್ಛಂದ ವಿಹಾರಕ್ಕೆ ತೊಡಕು ಎಂದು ಭಾವಿಸಿದ್ದಾಳೆ.

ಇತಿಹಾಸದ ಪುಟಗಳನ್ನು ಇಲ್ಲಿ ನೆನೆಯಬೇಕು. ಭಾರತೀಯರ ನೈತಿಕತೆಯ ಕಂಪು ವಿದೇಶದಲ್ಲೇ ಹರಡಿತ್ತು. ವಿದೇಶಿ ಪ್ರವಾಸಿಗರು ಭಾರತವನ್ನು ಮುಕ್ತಕಂಠದಿಂದ ಹೊಗಳಿದ್ದರು. ಚೀನಾದೇಶದ ಪ್ರವಾಸಿ ಹ್ಯುವೆನ್‌ತ್ಸಾಂಗ್ ಸಾವಿರದ ಐದುನೂರು ವರ್ಷಗಳ ಹಿಂದೆ ಭಾರತಕ್ಕೆ ಬಂದಾಗ ಇಲ್ಲಿಯ ಸಂಪತ್ತನ್ನು ಕಂಡು ಬೆರಗಾಗಿದ್ದ. ಗ್ರೀಕರ ರಾಯಭಾರಿಯಾಗಿ ಮೆಗಾಸ್ತನೀಸ್ ಇಲ್ಲಿಗೆ ಬಂದಾಗ ಮನೆಗಳಿಗೆ ಬೀಗ ಇಲ್ಲದಿರುವುದನ್ನು ಕಂಡು ಅಚ್ಚರಿ ಪಟ್ಟಿದ್ದ. ಭೂಸಂಚಾರಿ ಮಾರ್ಕೊಪೋಲೋ ಹೇಳಿದ್ದ, 'ಭೂಲೋಕದಲ್ಲೇ ಭಾರತೀಯರು ಅತ್ಯಂತ ಒಳ್ಳೆಯವರು, ಸತ್ಯವಂತರಾದ ವ್ಯಾಪಾರಿಗಳು; ಅವರು ಯಾವ ಕಾರಣದಿಂದಲೂ ಸುಳ್ಳು ಹೇಳುವುದಿಲ್ಲ.' ಹನ್ನೊಂದನೆಯ ಶತಮಾನದಲ್ಲಿ ಬಂದ ಮಹಮ್ಮದೀಯ ಇದ್ರಿಸಿ, 'ಇಂಡಿಯಾ ದೇಶದ ಜನರು ನಂಬಿಕೆ, ಸತ್ಯನಿಷ್ಠೆಗೆ ಪ್ರಸಿದ್ಧರಾಗಿದ್ದಾರೆ' ಎಂದಿದ್ದ. ಮುನ್ನೂರು ವರ್ಷಗಳ ಹಿಂದೆ ಪೋರ್ಚುಗೀಸರು ಬರೆದರು, 'ಹಿಂದುಗಳು ಮೊದಲು ಸೂಚನೆ ನೀಡದೆ ಯುದ್ಧ ಮಾಡುವುದಿಲ್ಲ. ವೀರರಾದ ಇವರು ಶತ್ರುಗಳ ಬಗ್ಗೆ ಸ್ವಲ್ಪವೂ ದ್ವೇಷ ಇಟ್ಟುಕೊಂಡವರಲ್ಲ.' ಎಂದು.

ಜಗತ್ತಿನ ಅಸಂಖ್ಯ ರಾಜರುಗಳಲ್ಲಿ ಅಶೋಕ ಚಕ್ರವರ್ತಿ ಮಾತ್ರ ದೇದೀಪ್ಯಮಾನವಾದ ಧ್ರುವನಕ್ಷತ್ರದಂತೆ ಕಂಗೊಳಿಸುತ್ತಾನೆ ಎಂದು ಜಗತ್ತಿನ ಇತಿಹಾಸ ಬರೆದ ಎಚ್.ಜಿ.ವೆಲ್ಸ್ ಹೇಳಿದ್ದು ಅತಿಶಯೋಕ್ತಿಯಾಗಿರಲಿಲ್ಲ. ಚಕ್ರವರ್ತಿ ಹರ್ಷವರ್ಧನ ಪ್ರತಿ ಐದುವರ್ಷಕ್ಕೊಮ್ಮೆ ತಾನು ಸಂಗ್ರಹಿಸಿದ್ದ ಐಶ್ವರ್ಯವನ್ನು ವಿದ್ವಾಂಸರಿಗೆ ಮತ್ತು ಬಡವರಿಗೆ ಸಂಪೂರ್ಣವಾಗಿ ಹಂಚುತ್ತಿದ್ದನಂತೆ.

ದಿವ್ಯಪ್ರೀತಿಯ ಮೂಲಸ್ರೋತ ಅಧ್ಯಾತ್ಮದಲ್ಲಿದೆ. 'ಮುಖಂಡನಾಗುವವನಿಗೆ ಮೊದಲು ಹೃದಯಸಂಪನ್ನತೆ ಇರಬೇಕು' ಎನ್ನುತ್ತಿದ್ದರು ವಿವೇಕಾನಂದರು.

ದ್ವೇಷ ಎಂಬುದು ಮಹಾದೋಷ. ದ್ವಿವಿಷ ಎಂದರೆ ವಿಷದ ಎರಡು ಪಾಲು– ಅದುವೆ ದ್ವೇಷ. ಯಾರು ದ್ವೇಷ ಮಾಡುತ್ತಾರೋ ಅವರು ತಾವೂ ಉರಿಯುತ್ತಾರೆ, ಇತರರನ್ನೂ ಉರಿಸುತ್ತಾರೆ. ದ್ವೇಷದಿಂದ ಮನುಷ್ಯ ನಡೆದಾಡುವ ವಿಷದ ಕಾರ್ಖಾನೆಯಾಗುತ್ತಾನೆ. "ದ್ವೇಷಕ್ಕಿಂತ ಭಯಾನಕವಾದ ಹತ್ಯೆ ಬೇರೊಂದಿಲ್ಲ. ದ್ವೇಷವೇ ಅತ್ಯಂತ ಭೀಕರ ಜ್ವರ. ದ್ವೇಷದಿಂದ ದ್ವೇಷ ಎಂದಿಗೂ ಅಳಿಯದು. ಪ್ರೀತಿಯಿಂದ ದ್ವೇಷವನ್ನು ಗೆಲ್ಲಿರಿ" ಎಂದು ಬುದ್ಧ ಹೇಳಿದ್ದಾನೆ.

ನಿಂದೆಯ ನುಡಿಗೆ ಕಿವುಡರಾಗಿರಬೇಕು. 'ತಮಗಿಂತಲೂ ಹೆಚ್ಚು ವಿದ್ಯಾವಂತರು, ಹೆಚ್ಚು ಯಶಸ್ವಿಯಾದವರನ್ನು ಟೀಕಿಸಿದಾಗ, ಕೆಲವರಿಗೆ ಅನಾಗರಿಕ ಆನಂದ ಉಂಟಾಗುತ್ತದೆ' ಎಂದ ಬುದ್ಧ.

ಪ್ರೀತಿಯೇ ಪರಮೌಷಧಿ ಎನ್ನುತ್ತಾರೆ. ಪ್ರೀತಿಸುವುದನ್ನು ನಾವು ನಿಸರ್ಗದಿಂದ ಕಲಿಯಬೇಕು. ಅರಳಿದ ಕುಸುಮಗಳ ಮೇಲೇರುವ ಭ್ರಮರಗಳ ಮೇಲೆ ಪುಷ್ಪಗಳು ದ್ವೇಷ ಮಾಡುತ್ತವೆಯೇ? ತುಂಬಿದ ಕೆಚ್ಚಲಿಗೆ ಕೈಹಾಕಿ ಹಾಲು ಹಿಂಡುವ ಗೊಲ್ಲನ ಕೈ ಕಡಿಯಲು ಕಾಮಧೇನು ಹೊರಡುವುದೆ? ಮೀನುಗಳು ಹೆಚ್ಚಾದವು ಎಂದು ಕೋಪಗೊಂಡು ಸಾಗರ ಬತ್ತುವುದೆ? ಅಸೂಯೆ, ಅತೃಪ್ತಿಗಳನ್ನು ನಿರ್ನಾಮ ಮಾಡುವುದೇ ಪ್ರೀತಿ. 'ಸರ್ವೇ ಜನಾಃ ಸುಖಿನೋ ಭವಂತು'– ಇದುವೇ ಪ್ರೀತಿಯ ಮಂತ್ರ. ◆

---

**ಆತ್ಮಶ್ರದ್ಧೆ ಇಂದು ನನಗೆ ಬೇಕಾಗಿದೆ, ನಿಮಗೆಲ್ಲ ಬೇಕಾಗಿದೆ. ಇದನ್ನು ಪಡೆದುಕೊಳ್ಳುವ ಮಹಾಸಾಹಸ ನಿಮ್ಮ ಮುಂದೆ ಇದೆ. ಎಲ್ಲವನ್ನೂ ಹಾಸ್ಯ ಮಾಡುವ ಹುಡುಗಾಟಿಕೆಯ ಸ್ವಭಾವ ನಮ್ಮ ಜನಾಂಗದ ಜೀವನದ ಮೇಲೆ ದಾಳಿ ಇಡುತ್ತಿದೆ. ಅದನ್ನು ತ್ಯಜಿಸಿ. ಧೀರರಾಗಿ, ಶ್ರದ್ಧಾವಂತರಾಗಿ, ಉಳಿದುದೆಲ್ಲವೂ ಸ್ವಾಭಾವಿಕವಾಗಿಯೇ ಸಿದ್ಧಿಸುವುದು.**

**–ಸ್ವಾಮಿ ವಿವೇಕಾನಂದ**

ಪುಸ್ತಕ ಪರಿಚಯ

# ವಿಜಯಿನಿ

(ಕನ್ನಡ ಪದ್ಯಗಳಲ್ಲಿ ಭಗವದ್ಗೀತೆಯ ಶ್ಲೋಕಗಳ ಅನುವಾದ)
ಲೇಖಕರು: ವಿಜಯನಾಥ ಭಟ್ಟ 'ಕೌಂಡಿನ್ಯ'
ಪ್ರಕಾಶಕರು : ಸ್ವಾಮಿ ವಿವೇಕಾನಂದ ಯೂಥ್ ಮೂವ್‌ಮೆಂಟ್, ವಿವೇಕಾನಂದ ಭಾರತೀಯ ಅಧ್ಯಯನ ಸಂಸ್ಥೆ, ಮೈಸೂರು – ೧೬

**ಈ ಕೃತಿಯ ಪ್ರಾರಂಭದಲ್ಲಿ ಶ್ರೀ ಬನ್ನಂಜೆಯವರು ಬರೆದ 'ಪ್ರೀತಿಯ ಹರಕೆ'ಯನ್ನಿಲ್ಲಿ ಪ್ರಕಟಿಸುತ್ತಿದ್ದೇವೆ. ಹರಕೆಯೊಂದಿಗೆ, ಕೃತಿಯ ಸುಂದರ ಪರಿಚಯವನ್ನೂ ಅದು ಮಾಡಿಕೊಡುತ್ತದೆ.**

ಭಗವದ್ಗೀತೆ ಈಗಾಗಲೇ ಪ್ರಪಂಚದ ಹೆಚ್ಚಿನ ಭಾಷೆಗಳಲ್ಲಿ ಅನುವಾದಗೊಂಡಿದೆ. ಕನ್ನಡದಲ್ಲಿಯೂ ಎಷ್ಟು ಬೆಳಕು ಕಂಡವು ಎಂದು ಲೆಕ್ಕ ಹಿಡಿಯುವುದು ಕಷ್ಟ. ಈಗ ವಿಜಯನಾಥ ಭಟ್ಟರ (ಕೌಂಡಿನ್ಯ) ಸರದಿ.




ಕೆಲವರು ಚುಟುಕಾಗಿ ಪದ್ಯದಲ್ಲಿ ಬರೆದರು; ಗೀತೆಯ ಗೇಯರೂಪವನ್ನು ಉಳಿಸುವುದಕ್ಕಾಗಿ. ಕೆಲವರು ವಿಸ್ತಾರವಾಗಿ ಗದ್ಯದಲ್ಲಿ ಬರೆದರು; ಗೀತೆಯಲ್ಲಿ ತಾವು ಕಂಡ ಆಳ–ಹರವನ್ನು ತಿಳಿಸುವುದಕ್ಕಾಗಿ.

ಎಷ್ಟು ಬರೆದರೂ ಗೀತೆ ಹಳಸಿದ್ದಿಲ್ಲ; ಹಳತಾದದ್ದಿಲ್ಲ. ಭಗವದ್ಗೀತೆಯ ಬಗೆಗೆ ಹೇಳಬೇಕಾದದ್ದೆಲ್ಲ ಹೇಳಿ ಮುಗಿಯಿತು ಎಂದು ಹೇಳುವ ಕಾಲ ಎಂದೂ ಬರುವುದಿಲ್ಲ. ಏಕೆಂದರೆ ಅದು ಭಗವದ್ಗೀತೆ : 'ಭಗವಾನುವಾಚ' ; ಭಗವಂತ ನುಡಿದಿದ್ದು!

ಗೀತೆಯ ೭೦೦ (ಕೆಲವು ಪಾಠದಲ್ಲಿ ೭೦೧) ಪದ್ಯಗಳಲ್ಲಿ ೫೭೪ ಪದ್ಯಗಳು ಭಗವಂತನ ನಲ್ನುಡಿ. ೮೪ (ಕೆಲವು ಪಾಠಗಳಲ್ಲಿ ೮೫) ಅರ್ಜುನನದು. ४೧ ಸಂಜಯನದು. ಮೊದಲಿನದೊಂದು ಧೃತರಾಷ್ಟ್ರನದು.

ಹೌದು. ಕುರುಡನ ಪ್ರಶ್ನೆಯಿಂದಲೇ ಗೀತೆ ತೊಡಗಬೇಕು. ಅರ್ಜುನನಿಗೂ ಒಳಗಿಂದ ಮೋಹದ ಕುರುಡೇ. ಕುರುಡು ಕತ್ತಲಿನಿಂದ ಬೆಳಕಿನೆಡೆಗೆ ಪಯಣವೇ ಗೀತೆ: 'ತಮಸೋ ಮಾ ಜ್ಯೋತಿರ್ಗಮಯ.'

ಇದು ಕಣ್ಣಿದ್ದೂ ಕಾಣದವರ ಪ್ರಶ್ನೆಗೆ ಕಣ್ಣಿರದೆಯೂ ಕಾಣಬಲ್ಲವನ ಉತ್ತರ: 'ಪಶ್ಯತ್ಯಚಕ್ಷುಃ.' ಕತ್ತಲ ಮೊಟ್ಟೆಯೊಡೆದು ಬೆಳಕು ಚಿಮ್ಮುವ ವಿಸ್ಮಯ!

ಗೀತೆ ಅನಂತಮುಖಿ. ನಾವು ಯಾವ ನಿಟ್ಟಿನಿಂದ ನೋಡಿದರೂ ಆ ನಿಟ್ಟಿನಲ್ಲಿ ತೆರೆದುಕೊಳ್ಳುತ್ತದೆ. ಅದೊಂದು ಅಗಾಧವಾದ ಕಡಲು. ಎಷ್ಟು ನೀರು ಮೊಗೆದುಮೊಗೆದು ತೆಗೆದರೂ ತಳ ಕಾಣಿಸದು; ಆಚೆಯ ದಡ ಕಾಣಿಸದು.

ನಾನು ಕಳೆದ ನಾಲ್ಕು ದಶಕಗಳಿಂದ ಗೀತೆಯನ್ನು ಓದುತ್ತ ಬಂದಿದ್ದೇನೆ. ಪ್ರತಿಯೊಂದು ಬಾರಿಯೂ ಹೊಸ ಅರ್ಥದ ಆಯಾಮವನ್ನು ಕಂಡಿದ್ದೇನೆ. ಕಂಡು ದಿಗಿಲುಗೊಂಡಿದ್ದೇನೆ! ಅದು ನಿಜಕ್ಕೂ ಭಾರತದ ಸಾರಸರ್ವಸ್ವ : 'ಮಹಾಭಾರತ ಪಾರಿಜಾತ ಮಧುಭೂತ'.

ಈ ಮಧುವನ್ನು ಹೀರಿದ ಭೃಂಗಗಳು ಸಾವಿರಸಾವಿರ. ಹೀಗೆ ಸಾಕೆನಿಸಿದವರಿಲ್ಲ, ಹೀರಿ ಮುಗಿಸಿದವರಿಲ್ಲ; ಇದೊಂದು ಅಕ್ಷಯ ಮಧುಪಾತ್ರೆ.

ಈಗಾಗಲೇ ಕನ್ನಡದಲ್ಲಿ ಗೀತೆಯ ಪದ್ಯಾನುವಾದಗಳು ಸಾಕಷ್ಟು ಬಂದಿವೆ. ಅದಕ್ಕೆ ತನ್ನದೊಂದನ್ನು ಪೋಣಿಸಿದ್ದಾರೆ ಗೆಳೆಯ ವಿಜಯನಾಥ ಭಟ್ಟರು. ಪ್ರತಿಯೊಂದು ಅನುವಾದವೂ ಒಂದು ಹೊಸ ಅನುಭವವೇ. ವಿಜಯನಾಥ ಭಟ್ಟರದು ಕೂಡ. ಎಲ್ಲವೂ ಗೀತೆಯನ್ನು ಮುಟ್ಟುತ್ತದೆ; ಯಾವುದೂ ಗೀತೆಯನ್ನು ಪೂರ್ತಿ ಮುಟ್ಟುವುದಿಲ್ಲ. ಗೀತೆಯ ಪಂಚಾಂಗವೆ ಒಂದು ಪವಾಡ. ಎಷ್ಟು ಹೊಸ ಮನೆ ಕಟ್ಟಿದರೂ ಮತ್ತಷ್ಟು ಪಂಚಾಂಗ ಖಾಲಿಯಿರುತ್ತದೆ!

ಪುರಾಣಗಳಲ್ಲಿ ಒಂದು ಮಾತಿದೆ: 'ದಶಾರ್ಥಾಃ ಸರ್ವ ಭಾರತೇ' ; ಇಡಿಯ ಭಾರತಕ್ಕೆ ಹತ್ತು ಅರ್ಥಗಳು. ಅದರಿಂದ ಗೀತೆಗೆ ಕೂಡ. ಹತ್ತು ಎಂದರೆ ಹತ್ತೇ ಅಲ್ಲ, ಹತ್ತಾರು ಅರ್ಥಗಳು. ಹತ್ತಾರು ಮಂದಿ ಹತ್ತಾರು ಬಗೆಯಿಂದ ಬರೆದರೂ ಮುಗಿಯದಷ್ಟು ಅರ್ಥಗಳು. ಇದರ ಜತೆಗೆ ಅವರವರ ತಲೆಗೆ ತೋಚಿದ ಪ್ರಜ್ಞಾವಾದದ ಅರ್ಥಗಳು; ಅಪಾರ್ಥಗಳು; ಅನರ್ಥಗಳು. ಗೀತೆಯ ಗಂಗೆಯಲ್ಲಿ ಮಿಂದು ತಾವು ಮಡಿಯಾದವರುಂಟು; ಗೀತೆಯನ್ನು ರಾಡಿ ಮಾಡಿದವರೂ ಉಂಟು.

ಅಲ್ಲವೇ ಮತ್ತೆ? ಒಂದೋ ಗೀತೆಯಲ್ಲಿದ್ದದ್ದು ನಮ್ಮೊಳಗೆ ಹೋಗಬೇಕು. ಅಥವಾ ನಮ್ಮೊಳಗೆ ಇದ್ದದ್ದನ್ನು ಗೀತೆಯೊಳಗೆ ತೂರಬೇಕು.

ಗಂಗೆಯಂತೆಯೇ ಗೀತೆಯೂ. ಅಲ್ಲಿ ನಾಸ್ತಿಕರೂ ಮೀಯುತ್ತಾರೆ. ಆಸ್ತಿಕರೂ ಮೀಯುತ್ತಾರೆ. ನಾಸ್ತಿಕರು ಮೈತೊಳೆಯುತ್ತಾರೆ. ಆಸ್ತಿಕರು ಮೈಮನಗಳೆರಡನ್ನೂ. ವಿಜಯನಾಥ ಭಟ್ಟರು ಆಸ್ತಿಕರು. ಬಹಳ ಸಮಯದಿಂದ ಗೀತೆಯಲ್ಲಿ ಮಿಂದವರು. ಗೀತೆಯ ಮಾತುಗಳು ಅವರ ಮನದೊಳಗೆ ಅನುಗಾಲ ಗುನುಗುಡುತ್ತಿದ್ದವು. ಕೊನೆಗೊಮ್ಮೆ ತಡೆಯಲಾರದೆ ಒಳಗೆ ತುಂಬಿದ್ದು ಹಾಡಾಗಿ ಹೊರಹೊಮ್ಮಿತ್ತು. ಇದೊಂದು ಅಂತಃಸ್ಫೋಟ!

ಹಿಂದಿನ ವಿದ್ವಾಂಸರು ಗೀತೆಯನ್ನು ಹಲವಾರು ಬಗೆಯಿಂದ ವಿವರಿಸಿದ್ದಾರೆ. ಆ ಎಲ್ಲ ವಿವರಣೆಗಳನ್ನು ಭಟ್ಟರು ಯಥೋಚಿತವಾಗಿ ಅಲ್ಲಿ ಇಲ್ಲಿ ಬಳಸಿಕೊಂಡಿದ್ದಾರೆ. ಎಷ್ಟೋ ಕಡೆ ನನ್ನ ಅಭಿಪ್ರಾಯ ಅವರ ಅಭಿಪ್ರಾಯಕ್ಕಿಂತ ಭಿನ್ನವಾಗಿರಬಹುದು. ಅದು ಮುಖ್ಯವಲ್ಲ. ಎಲ್ಲ ಅಭಿಪ್ರಾಯ ಭೇದದ ಜತೆಗೂ ನಾನು ಅವರ ವಿನೀತ ಪ್ರಾಮಾಣಿಕತೆಯನ್ನು ಮೆಚ್ಚಿಕೊಂಡಿದ್ದೇನೆ.

'ವಿಜಯ' ಎನ್ನುವುದು ಅರ್ಜುನನ ಹೆಸರೂ ಹೌದು. ಆ ವಿಜಯನಿಗೆ ವಿಜಯನಾಥ ಬರೆದ ಗೀತೆಯನ್ನು ಈ ವಿಜಯನಾಥ ಕಂಡ ಬಗೆ ಇದು. ಒಬ್ಬೊಬ್ಬರ ಕಾಣ್ಕೆ ಒಂದೊಂದು ತೆರ. ಎಲ್ಲರಿಗೂ ಒಂದೇ ತರ ಕಾಣಿಸಲಿಕ್ಕೆ ಗೀತೆಯೆಂದರೆ ದಿನಪತ್ರಿಕೆಯ ವರದಿಯಲ್ಲ.

ವಾಸ್ತವವಾಗಿ ಗೀತೆ ಇನ್ನೊಬ್ಬರಿಗೆ ಏನು ಅರ್ಥ ಕೊಟ್ಟಿದೆ ಎನ್ನುವುದು ಮುಖ್ಯವಲ್ಲ. ನಮ್ಮ ಬದುಕಿನ ಅನುಭವದ ಹಿನ್ನೆಲೆಯಲ್ಲಿ ನಮಗೇನು ಅರ್ಥವಾಯಿತು – ಅದು ಮುಖ್ಯ. ಅನುಭವ ಎಷ್ಟು ವಿಧವೋ ಅರ್ಥವೂ ಅಷ್ಟೇ ವಿಧ. ನಮ್ಮ ಗೀತೆಗೆ ನಮ್ಮ ಅರ್ಥ. ಆಗ ಓದು ಸಾರ್ಥಕ; ಬದುಕೂ ಸಾರ್ಥಕ.

ಗೆಳೆಯ ಭಟ್ಟರು ದುರ್ಗಮವಾದ ದಾರಿಯಲ್ಲಿ ಹೆಜ್ಜೆಯ ನ್ನಿಟ್ಟಿದ್ದಾರೆ: 'ದುರ್ಗಂ ಪಥಸ್ತತ್ ಕವಯೋ ವದಂತಿ.' ಹೆಜ್ಜೆ ಗುರಿ ಮುಟ್ಟಲಿ. ಗೀತಾಚಾರ್ಯನ ರಕ್ಷಾಕವಚ ಅವರಿಗಿರಲಿ.◆

**– ಬನ್ನಂಜೆ ಗೋವಿಂದಾಚಾರ್ಯ**

## 'ಸ್ವಾಮೀಜಿ ನನ್ನ ಪಾಲಿಗೆ ಒಂದು ಅದ್ಭುತ'

**ಮಿಸೆಸ್ ಎಡಿತ್ ಆಲನ್, ಇಡಾ ಆನ್‌ಸೆಲ್‌ಗೆ ಬರೆದ ಕೆಲವು ಪತ್ರಗಳಲ್ಲಿ ಸ್ವಾಮೀಜಿಯವರಿಗೆ ಸಂಬಂಧಿಸಿದ ಕೆಲವು ವಿಚಾರಗಳಿವೆ. ಅವು ಇಂತಿವೆ: "ಸ್ವಾಮೀಜಿಯವರು ಸಾನ್‌ಫ್ರಾನ್ಸಿಸ್ಕೊದಿಂದ ಹೊರಡುವ ವಿಷಯವನ್ನು ತಿಳಿಸಿದಾಗ ನನಗೆ ಬಹಳ ನೋವಾಯಿತು. ಅವರು 'ನಾನು ನಿಮಗೆ ಇನ್ನೊಬ್ಬ ಸ್ವಾಮಿಯನ್ನು ಕಳುಹಿಸಿಕೊಡುತ್ತೇನೆ. ನಾನು ಮಾತನಾಡಿದುದನ್ನು ಅವರು ಬದುಕಿ ತೋರಿಸುತ್ತಾರೆ' ಎಂದರು. ಮೊದಲ ಬಾರಿ ನಾನು ಸ್ವಾಮಿ ತುರೀಯಾನಂದರನ್ನು ಕಂಡಾಗ ನನ್ನ ಮನಸ್ಸಿನಲ್ಲಿ ಉದಿಸಿದ ಭಾವನೆಗಳನ್ನು ಶಬ್ದಗಳಲ್ಲಿ ಹೇಳಲಾಗದು. ಅವರು ನನಗೆ ಪ್ರೇಮಮಯರಾಗಿ ಗೋಚರಿಸಿದರು. ಸ್ವಾಮೀಜಿಯವರು ಅವರ ಕುರಿತಾಗಿ ಹೇಳಿದುದನ್ನು ಹೇಳಿದಾಗ ಅವರು ಹೇಳಿದರು, 'ನಾನು ಒಂದು ಸಾಮಾನ್ಯ ತೆಪ್ಪ. ನಾನು ಒಬ್ಬಿಬ್ಬರನ್ನು ಆಚೆಯ ದಡಕ್ಕೆ ತಲುಪಿಸಬಹುದೇನೋ. ಆದರೆ ಸ್ವಾಮೀಜಿ ಅಟ್ಲಾಂಟಿಕ್ ಲೈನರ್, ಸಾವಿರಾರು ಜನರನ್ನು ಇನ್ನೊಂದು ದಡಕ್ಕೆ ತಲುಪಿಸುವವರು. ಇದನ್ನು ಎಂದಿಗೂ ಮರೆಯದಿರು. ಅವರೊಬ್ಬರೇ ನಿಜವಾದ ಅರ್ಥದಲ್ಲಿ ಸ್ವಾಮೀಜಿ.' "**

**ಎಡಿತ್ ಇನ್ನೊಂದು ಪತ್ರದಲ್ಲಿ ಬರೆಯುತ್ತಾಳೆ, "ಸ್ವಾಮೀಜಿ ಹೇಳಿದ್ದರು, ನೀರಿನಲ್ಲಿ ಒಂದು ಕಲ್ಲನ್ನು ಎಸೆದಾಗ ಒಂದು ವರ್ತುಲ ಏರ್ಪಡುತ್ತದೆ, ಕ್ರಮೇಣ ಚಿಕ್ಕ ಚಿಕ್ಕ ಕ್ಷೀಣ ಪ್ರಭಾವವುಳ್ಳ ವರ್ತುಲಗಳು ಏರ್ಪಡುತ್ತ ಹೋಗುತ್ತವೆ. ಅದೇ ರೀತಿ ಅವತಾರಪುರುಷ ಆಗಮಿಸಿದಾಗಲೂ ಆಗುತ್ತದೆ. ಅವನು ದೊಡ್ಡ ಕಲ್ಲು. ಅವನು ಆಗಮಿಸಿದಾಗ ಅವನ ಸುತ್ತ ಬಹಳಷ್ಟು ವರ್ತುಲಗಳು – ಒಂದಕ್ಕಿಂತ ಒಂದು ಕಿರಿದಾದ, ಆದರೆ ದೊಡ್ಡ ಪರಿಧಿ ಇರುವಂತಹ ವರ್ತುಲಗಳು ನಿರ್ಮಾಣವಾಗುತ್ತವೆ. ನಾವು ಅಂತಹ ಒಂದು ವರ್ತುಲದಲ್ಲಿದ್ದೇವೆ ಎಂಬುದೇ ನಮಗೆ ಆನಂದದ ಅನುಭವವನ್ನು ಕೊಡುತ್ತದೆ. ನಾನು ಸ್ವಾಮೀಜಿಯವರ ಕುರಿತು ಆಲೋಚಿಸಿದಷ್ಟೂ ಅವರು ಅದ್ಭುತರಾಗುತ್ತಾರೆ"**

**ಆಕೆ ಹೀಗೆ ಮುಂದುವರಿಸುತ್ತಾಳೆ: "ಸ್ವಾಮೀಜಿ ನನ್ನ ಪಾಲಿಗೆ ಒಂದು ಅದ್ಭುತ. ಅದ್ಭುತ ಎಂದು ಹೇಳಿದಾಗ ಗೌರವಾದರ, ಬೆರಗು ವಿಸ್ಮಯವನ್ನುಂಟುಮಾಡುವವರು ಎಂದರ್ಥ. ನಾವು ಜಗತ್ತಿನ ಅದ್ಭುತಗಳನ್ನು, ಅಂದರೆ ಈಜಿಪ್ಟಿನ ಪಿರಮಿಡ್, ಬ್ಯಾಬಿಲೋನಿಯಾದ ತೂಗುವ ಉದ್ಯಾನಗಳು, ಅಲೆಕ್ಸಾಂಡ್ರಿಯಾದ ಲೈಟ್ ಹೌಸ್, ಚೈನಾದ ಗೋಡೆ, ಭಾರತದ ತಾಜ್‌ಮಹಲ್ ಮತ್ತು ರೋಮಿನ ರೋಮನ್ ಕೊಲೋಸಿಯಮ್ ವೀಕ್ಷಿಸಿದಾಗ ಬೆರಗಾಗುತ್ತೇವೆ. ಅದೇ ರೀತಿ ನಾನು ಪುಸ್ತಕಭಂಡಾರದಲ್ಲಿ** The Life of Swami Vivekananda, The Complete Works of Swami Vivekananda, Reminiscences of Swami Vivekananda, Swami Vivekananda in the West - New Discoveries **ಇನ್ನೂ ಹತ್ತು–ಹಲವು ಗ್ರಂಥಗಳನ್ನು ನೋಡಿ ಸ್ವಾಮೀಜಿಯವರ ಮಹಾದ್ಭುತ ಜೀವನದರ್ಶನವನ್ನು ಭಾವಿಸುತ್ತ ಬೆರಗಾಗುತ್ತೇನೆ. ಮಾನವತೆಗೆ ಮುಂದಿನ ೧೫೦೦ ವರ್ಷಗಳಿಗಾಗುವಂತಹ ಆಸ್ತಿ ಅದು. ಇದು ಅದ್ಭುತವಲ್ಲವೆ? ಮುಂಬರಲಿರುವ ಜನಾಂಗಗಳೂ ಸ್ವಾಮೀಜಿಯವರ ಜೀವನ–ಸಂದೇಶಗಳ ಘನತೆಯನ್ನು ಕಂಡು ನಿಬ್ಬೆರಗಾಗಲಿವೆ, ಶಿರಬಾಗಿ ಅನುಸರಿಸಲಿವೆ..."**

**(ಮೂಲ : ಸ್ವಾಮಿ ಚೇತನಾನಂದ ; ಸಂಗ್ರಹ ಮತ್ತು ಅನುವಾದ: ಮಾತಾ ತ್ಯಾಗಮಯೀ)**




## ದಶಮ ಸ್ಕಂಧ

### ಭಾಗ–೧

# ಶ್ರೀ ಕೃಷ್ಣನ ಜನನದ ಹಿನ್ನೆಲೆ

ದ್ವಾಪರಯುಗದಲ್ಲಿ ದಾನವರು ಭೂಲೋಕದಲ್ಲಿ ದೌರ್ಜನ್ಯ ನಡೆಸಲು ಬಹುತೇಕ ಕ್ಷತ್ರಿಯರಾಗಿ ಜನಿಸಿದರು. ಜನಸಾಮಾನ್ಯರನ್ನು ಧರ್ಮದ ಹಾದಿಯಿಂದ ದಿಕ್ಕು ತಪ್ಪಿಸಿದರು. ಮಂದಾಂಧರಾದ ಕ್ಷತ್ರಿಯರ ದುರಾಡಳಿತವನ್ನು ಸಹಿಸಲಾರದೆ ಭೂದೇವಿಯು ಗೋವಿನ ರೂಪ ತಾಳಿ, ಬ್ರಹ್ಮದೇವರಲ್ಲಿ ಮೊರೆಹೋದಳು. ಬ್ರಹ್ಮನು ಸಕಲ ದೇವತೆಗಳನ್ನು ಕರೆದುಕೊಂಡು ಕ್ಷೀರಸಮುದ್ರದ ದಂಡೆಗೆ ಬಂದನು. ಅಲ್ಲಿ ಶ್ರೀಮನ್ನಾರಾಯಣನನ್ನು ಪುರುಷ ಸೂಕ್ತದಿಂದ ಪ್ರಾರ್ಥಿಸಿದನು. ಸ್ವಲ್ಪ ಹೊತ್ತಿನಲ್ಲಿ ಬ್ರಹ್ಮನಿಗೆ ಅಶರೀರವಾಣಿ ಕೇಳಿಸಿತು. ಅದನ್ನು ಕೇಳಿಸಿಕೊಂಡ ಬ್ರಹ್ಮ ದೇವನು ಸಂತಸಗೊಂಡನು. ದೇವತೆಗಳನ್ನು ಕುರಿತು, "ನಿಮ್ಮ ಕೆಲಸವಾಯಿತು. ಇನ್ನು ಕೆಲವೇ ದಿನಗಳಲ್ಲಿ ದೇವರ ದೇವ ನಾದ ನಾರಾಯಣನು ವಸುದೇವನ ಮಗನಾಗಿ ಜನಿಸಿ ಬರುತ್ತಾನೆ. ಆದಿಶೇಷನು ಭಗವಂತನ ಅಣ್ಣನಾಗಿ ಜನಿಸುತ್ತಾನೆ. ಅವರ ಸೇವೆಗಾಗಿ ಯಾದವರ ಕುಲದಲ್ಲಿ ನೀವೆಲ್ಲರೂ ಜನಿಸಿರಿ, ದೇವತಾಸ್ತ್ರೀಯರೆಲ್ಲಾ ಗೋಪಿಕಾಸ್ತ್ರೀಯರಾಗಿ ಜನಿಸಿರಿ. ಋಷಿ ಸಾಧುಸಂತರೆಲ್ಲಾ ಗೋವುಗಳಾಗಿ ಜನಿಸಿ, ಭಗವಂತನಿಗೆ ಸೇವೆ ಮಾಡಿರಿ. ನೀವೆಲ್ಲಾ ಧೈರ್ಯದಿಂದಿದ್ದು, ನಿಮ್ಮೆಲ್ಲ ಕೆಲಸ ಕಾರ್ಯಗಳಲ್ಲಿ ಮುಂದುವರಿಯಿರಿ" ಎಂದನು.

ಮಥುರಾಪಟ್ಟಣವನ್ನು ಯಾದವರ ರಾಜ ಉಗ್ರಸೇನ ಮಹಾರಾಜನು ಆಳುತ್ತಿದ್ದನು. ಅವನಿಗೆ ಕಂಸ ಮತ್ತು ದೇವಕಿ ಎಂಬ ಮಕ್ಕಳಿದ್ದರು. ಉಗ್ರಸೇನ ಮಹಾರಾಜನು ದೇವಕಿಯನ್ನು ವಸುದೇವನಿಗೆ ಕೊಟ್ಟು ಮದುವೆ ಮಾಡಿದನು. ಮಗಳಿಗಾಗಿ ನೂರಾರು ಬಂಗಾರದ ರಥಗಳನ್ನೂ, ಹತ್ತು ಸಾವಿರ ಕುದುರೆಗಳನ್ನೂ, ಅವಳ ಸೇವೆಗಾಗಿ ಇನ್ನೂರು ದಾಸಿಯರನ್ನೂ ಕೊಟ್ಟನು. ದೇವಕಿಯ ಅಣ್ಣನಾದ ಕಂಸನಿಗೆ ತಂಗಿಯ ಮೇಲೆ ವಿಶೇಷವಾದ ಪ್ರೀತಿಯಿತ್ತು. ನವದಂಪತಿಗಳನ್ನು ಕಳುಹಿಸಿ ಬರಲು ತಾನೇ ಸಾರಥಿಯಾಗಿ ಮೆರವಣಿಗೆಯಲ್ಲಿ ಗಂಡನ ಮನೆಗೆ ಹೊರಟನು. ಇಂತಹ ಸಮಯದಲ್ಲಿ ಎಲ್ಲರಿಗೂ ಕೇಳಿಸುವಂತೆ ಆಕಾಶವಾಣಿಯಾಯಿತು: "ಎಲೈ ಕಂಸನೇ, ನಿನ್ನ ತಂಗಿಯ ಎಂಟನೇ ಗರ್ಭದಲ್ಲಿ ಜನಿಸುವ ಮಗುವು ನಿನ್ನನ್ನು ಸಂಹರಿಸುತ್ತದೆ, ಎಚ್ಚರ!!" ಕೂಡಲೇ ಕಂಸನು ತಾನು ನಡೆಸುತ್ತಿದ್ದ ರಥವನ್ನು ನಿಲ್ಲಿಸಿ, ತನ್ನ ತಂಗಿಯ ಕೇಶರಾಶಿಯನ್ನು ಹಿಡಿದು ಖಡ್ಗದಿಂದ ಆಕೆಯ ಶಿರಚ್ಛೇದನ ಮಾಡಲು ಮುಂದಾದನು. ದೇವಕಿಯ ಗಂಡನಾದ ವಸುದೇವನು ಕಂಸನನ್ನು ತಡೆದು, "ಕಂಸೇಂದ್ರಾ ! ನಿನಗೆ ಮರಣ ಎನ್ನುವುದು ಇವಳಿಂದ ಅಲ್ಲ. ಇವಳಿಂದ ಜನಿಸುವ ಮಕ್ಕಳಿಂದ ಅಲ್ಲವೇ? ಇವಳನ್ನು ಕೊಂದರೆ ನಿನಗೆ ಸ್ತ್ರೀಹತ್ಯಾ ದೋಷವು ಬರುತ್ತದೆ" ಎಂದನು. ಕಂಸನಿಗೂ ಅವನ ಮಾತು ಯೋಗ್ಯವೆನಿಸಿತು. ತಕ್ಷಣವೇ ತಂಗಿಯನ್ನು ಬಿಟ್ಟನು. ದೇವಕಿಯ ಉದರದಲ್ಲಿ ಜನಿಸಿದ ಮಗುವನ್ನು ತನಗೆ ತಂದೊಪ್ಪಿಸಬೇಕೆಂದು ಕಟ್ಟಪ್ಪಣೆ ಮಾಡಿದನು. ವಸುದೇವನು 'ಹಾಗೆಯೇ ಆಗಲಿ' ಎಂದು ವಚನವನ್ನಿತ್ತನು.

ಕಾಲ ಕಳೆದಂತೆ ದೇವಕಿಯು ಗರ್ಭ ಧರಿಸಿದಳು. ಆಕೆ ಹಡೆದ ಮೊದಲ ಮಗುವನ್ನು ವಸುದೇವನು ಕಂಸನಿಗೆ ಒಪ್ಪಿಸಿದನು. ಕಂಸನಿಗೆ ಪರಮ ಸಂತೋಷವಾಯಿತು. ಅವನು

ವಸುದೇವನಿಗೆ, 'ಎಂಟನೇ ಮಗುವಿನಿಂದ ಮರಣವಿರುವುದರಿಂದ, ಇದನ್ನು ನೀನೇ ತೆಗೆದುಕೊಂಡು ಹಿಂತಿರುಗು' ಎಂದನು. ಒಮ್ಮೆ ನಾರದರು ಕಂಸನಲ್ಲಿಗೆ ಬಂದರು. ಅವರಿಂದ ಕಂಸನು ತನ್ನ ಹಿಂದಿನ ಜನ್ಮದಲ್ಲಿ ತಾನು ದೈತ್ಯನಾಗಿ ಜನಿಸಿದ್ದನೆಂಬುದನ್ನು ತಿಳಿದನು. ಯಾದವರು ಮತ್ತು ಯಾದವರ ಸ್ತ್ರೀಯರೇ ದೇವದೇವತೆಯರು ಎಂಬುದನ್ನು ಸಹ ತಿಳಿದನು. ದೇವಕಿಯ ಎಂಟನೇ ಮಗ ನಿನ್ನನ್ನು ಸಂಹರಿಸುವನು; ಯಾದವರೆಲ್ಲರೂ ಆತನಿಗೆ ಸಹಕರಿಸುವರು ಎಂಬ ವಿಷಯವನ್ನು ತಿಳಿದ ಕಂಸನು ಮೊದಲು ದೇವಕಿಗೆ ಹುಟ್ಟಿದ್ದ ಎಲ್ಲ ಮಕ್ಕಳನ್ನೂ ಕೊಂದನು. ವಸುದೇವ ದೇವಕಿಯರಿಗೆ ಸಂಕೋಲೆ ತೊಡಿಸಿ ಕಾರಾಗೃಹದಲ್ಲಿಟ್ಟನು. ತಂದೆಯಾದ ಉಗ್ರಸೇನನನ್ನು ನಿಗ್ರಹಿಸಿ ರಾಜ್ಯದ ಎಲ್ಲ ಅಧಿಕಾರಸೂತ್ರಗಳನ್ನೂ ತಾನೇ ವಹಿಸಿಕೊಂಡನು. ತಾನೇ ರಾಜನೆಂದೂ ಸಾರಿಬಿಟ್ಟನು.

ಕಂಸನ ಉಪಟಳ ತಡೆಯಲಾರದೆ ಯಾದವರು ರಾಜ್ಯ ಬಿಟ್ಟು ಹೊರಟರು. ಮತ್ತೆ ಹಲವರು ಅವನಿಗೆ ಅಡಿಯಾಳಾಗಿ ಗುಲಾಮರಂತೆ ಬಾಳತೊಡಗಿದರು. ಕಂಸನು ದೇವಕಿಗೆ ಜನಿಸಲಿರುವ ಮಗನಿಂದ ಎದುರಿಸಬೇಕಾದ ಆಪತ್ತನ್ನು ತಡೆಯಲು ತನ್ನ ಪರಿವಾರದ ಸಂಘಟನೆ ಮಾಡಿಕೊಂಡನು. ಪ್ರಲಂಬ, ಚಾಣೂರ, ತೃಣಾವರ್ತ, ಮುಷ್ಟಿಕ, ಅರಿಷ್ಟ, ದ್ವಿವಿಧ, ಕೇಶಿ, ಬಾಣಾಸುರ, ನರಕಾಸುರ ಮತ್ತು ಪೂತನಿ ಮೊದಲಾದ ದೈತ್ಯ ಬಲಶಾಲಿಗಳ ಪಡೆಯನ್ನೇ ಕಂಸನು ಇಟ್ಟುಕೊಂಡನು.

ಇತ್ತ ದೇವಕಿಯು ಏಳನೇ ಗರ್ಭ ಧರಿಸಿದಳು. ಆ ಗರ್ಭದಲ್ಲಿ ಆದಿಶೇಷನು ಜನಿಸುವವನಾದ್ದರಿಂದ ಆತನ ರಕ್ಷಣೆಗಾಗಿ ಶ್ರೀಹರಿಯು ಯೋಗಮಾಯೆಯನ್ನು ಕರೆದು, "ಎಲೈ ಸಾಧ್ವಿಯೇ, ದೇವಕಿಯ ಗರ್ಭದಲ್ಲಿರುವ ಪಿಂಡವು ಆದಿಶೇಷನ ಅಂಶದಿಂದ ಕೂಡಿದೆ. ಅದರ ರಕ್ಷಣೆಗಾಗಿ ಅದನ್ನು ನಂದಗೋಕುಲದಲ್ಲಿರುವ ನಂದಗೋಪನ ಮನೆಯಲ್ಲಿ, ಕಂಸನಿಗೆ ಹೆದರಿ ಗುಪ್ತವಾಗಿ ವಾಸಿಸುತ್ತಿರುವ ವಸುದೇವನ ಪತ್ನಿ ರೋಹಿಣಿಯ ಗರ್ಭದಲ್ಲಿ ಇರಿಸು. ನಾನು ಎಂಟನೆಯ ಮಗುವಾಗಿ ದೇವಕಿಯ ಗರ್ಭವನ್ನು ಸೇರಿದಾಗ ನೀನು ಸಹ ನಂದಗೋಪನ ಮನೆಯಲ್ಲಿ ಹೆಂಡತಿಯಾದ ಯಶೋದೆಯ ಗರ್ಭವನ್ನು ಸೇರಿ ಸೂಕ್ತವಾದ ಕಾಲದಲ್ಲಿ ಜನಿಸು" ಎಂದನು. ಯೋಗಮಾಯೆಯು, "ಹಾಗೆಯೇ ಆಗಲಿ" ಎಂದು ಶ್ರೀಹರಿಗೆ ನಮಸ್ಕರಿಸಿ, ಆತನು ಹೇಳಿದಂತೆ ಕಾರ್ಯ ನಿರ್ವಹಿಸಿದಳು. ಆ ಯೋಗಮಾಯೆಯೇ ಮುಂದೆ ದುರ್ಗಾ, ಕಾಳಿ, ಭದ್ರಕಾಳಿ, ವಿಜಯೆ, ವೈಷ್ಣವಿ, ಕುಮುದೆ, ಚಂಡಿ, ಕೃಷ್ಣೆ, ಮಾಧವಿ, ಮಾಯೆ, ನಾರಾಯಣಿ, ಈಶಾನಿ, ಶಾರದೆ, ಅಂಬಿಕೆ ಎಂಬ ಹಲವು ನಾಮಗಳಿಂದ ಖ್ಯಾತಳಾಗಿ ಭಕ್ತಾದಿಗಳಿಂದ ಪೂಜಿಸಲ್ಪಡುತ್ತಾಳೆ.

ಯೋಗಮಾಯೆಯ ಕಾರ್ಯದಿಂದ ದೇವಕಿಯ ಏಳನೇ ಗರ್ಭವು ನಿಲ್ಲದೆ ಗರ್ಭಸ್ರಾವವಾಯಿತೆಂದು ಮಥುರಾ ಪಟ್ಟಣದ ಹಿರಿಯರೆಲ್ಲಾ ಹೇಳಿದರು. ಇದನ್ನು ಕಂಸನು ನಂಬಿದನು. ದೇವಕಿಯು ಮತ್ತೊಮ್ಮೆ ಗರ್ಭ ಧರಿಸಿದಳು. ಇದು ಎಂಟನೆಯ ಗರ್ಭವಾಗಿತ್ತು. ಶ್ರೀಹರಿಯು ಯುಕ್ತಕಾಲದಲ್ಲಿ ವಸುದೇವನ ಹೆಂಡತಿಯಾದ ದೇವಕಿಯ ಗರ್ಭವನ್ನು ಪ್ರವೇಶಿದನು. ಆಗ ದೇವಕಿಯ ಮೊಗವು ತೇಜಸ್ಸಿನಿಂದ ಕೂಡಿತ್ತು. ಆ ತೇಜಸ್ಸಿಗೆ ಮನೆಯೇ ಬೆಳಕಾಗುತ್ತಿತ್ತು. ಅವಳ ದೇಹಕಾಂತಿಯನ್ನು ಕಂಡು ಕಂಸನು ಬೆದರಿದನು. ದೇವತೆಗಳು ದೇವಕಿ ಇರುವ ಕಾರಾಗೃಹಕ್ಕೆ ಬಂದು, ವಿಷ್ಣುವನ್ನು ಸ್ತುತಿಸಿ ಹೋದರು.

ದೇವಕಿಗೆ ನವಮಾಸಗಳು ತುಂಬಿದವು. ಮಧ್ಯರಾತ್ರಿಯ ಆ ಶುಭಮುಹೂರ್ತದ ರೋಹಿಣೀ ನಕ್ಷತ್ರದಲ್ಲಿ, ಸಕಲ ಗ್ರಹಗಳು ಉಚ್ಚಸ್ಥಿತಿಯಲ್ಲಿರುವಾಗ ಶ್ರೀಹರಿಯು ದೇವಕಿ ಗರ್ಭದಿಂದ ಮಗುವಾಗಿ ಹೊರಬಂದು, ತಕ್ಷಣ ತನ್ನ ನಿಜರೂಪವನ್ನು ತೋರಿಸಿದನು. ಆಕಾಶದಲ್ಲಿ ದೇವದುಂದುಭಿಗಳು ಮೊಳಗಿದವು. ಗಂಧರ್ವರು, ಕಿನ್ನರರು ಗಾನ ಮಾಡಿದರು. ದೇವತೆಗಳು, ಋಷಿಗಳು ಪುಷ್ಪವೃಷ್ಟಿಯನ್ನು ಕರೆದರು. ಚತುರ್ಭುಜಗಳಲ್ಲಿ ಶಂಕ, ಚಕ್ರ, ಗದಾಧಾರಿಯಾಗಿ, ಶ್ರೀವತ್ಸಾಂಕಿತ ಪೀತಾಂಬರ ಧಾರಿಯಾಗಿ ಪ್ರತ್ಯಕ್ಷನಾದ ದೇವನನ್ನು ಕಂಡು ವಸುದೇವ, ದೇವಕಿಯರು ಭಕ್ತಿಪೂರ್ವಕವಾಗಿ ನಮಸ್ಕರಿಸಿದರು.ವಸುದೇವನು ತಾನು ಸೆರೆಮನೆಯಲ್ಲಿರುವುದರಿಂದ ಜನನಕಾಲಕ್ಕೆ ಮಾಡಬೇಕಾದ ಗೋವುಗಳ ದಾನವನ್ನು ಮುಂದೆ ಬಿಡುಗಡೆಯಾದಾಗ ಮಾಡುವುದಾಗಿ ಮನದಲ್ಲೇ ಸಂಕಲ್ಪಿಸಿದನು.

ಭಕ್ತಿಯಿಂದ ನಮಸ್ಕರಿಸಿದ ವಸುದೇವನನ್ನು ಕುರಿತು ಶ್ರೀಹರಿಯು, "ನಾನು ಇನ್ನು ಮುಂದೆ ಸಾಮಾನ್ಯ ಮಾನವ ಶಿಶುವಾಗುತ್ತೇನೆ. ನನ್ನನ್ನು ಈಗಲೇ ನಂದಗೋಕುಲಕ್ಕೆ ಕರೆದೊಯ್ಯಿರಿ. ಅಲ್ಲಿ ನಂದಗೋಪನ ಪತ್ನಿಯಾದ ಯಶೋದೆಯು ಹೆಣ್ಣು ಮಗುವನ್ನು ಹಡೆದಿದ್ದಾಳೆ. ನನ್ನನ್ನು ಯಶೋದೆಯ ಮಡಿಲಲ್ಲೂ, ಆ ಹೆಣ್ಣು ಮಗುವನ್ನು ಇಲ್ಲಿಗೆ ಕರೆತಂದು ದೇವಕಿಯ ಪಕ್ಕದಲ್ಲೂ ಮಲಗಿಸು" ಎಂದು ಹೇಳಿದನು. ಇದರ ಜೊತೆಗೆ, "ಹಿಂದಿನ ಜನ್ಮದಲ್ಲಿ ಅಂದರೆ ಸ್ವಾಯಂಭುವ ಮನ್ವಂತರದಲ್ಲಿ ನೀವು ಸುತಪಾ ಮತ್ತು ಪೃಶ್ನಿ ಎಂಬ ದಂಪತಿ ಗಳಾಗಿದ್ದು, ಬ್ರಹ್ಮದೇವರ ಆಜ್ಞೆಯಂತೆ ಭಗವಂತನನ್ನು ಮಗುವಾಗಿ ಪಡೆಯಬೇಕೆಂದು ತಪಸ್ಸು ಮಾಡಿದ್ದಿರಿ. ಆಗ ನಾನು ಗರ್ಭ ಎಂಬ ಹೆಸರಿನಿಂದ ನಿಮಗೆ ಮಗುವಾಗಿ ಜನಿಸಿದ್ದೆನು. ನಂತರ ನೀವಿಬ್ಬರೂ ಎರಡನೇ ಜನ್ಮ ತಾಳಿ ಕಶ್ಯಪ ಮತ್ತು ಅದಿತಿಯರಾದಿರಿ. ಆಗ ನಾನು ಮತ್ತೆ ನಿಮ್ಮ ಮಗನಾಗಿ ಜನಿಸಿ, ವಾಮನಾವತಾರ ತಾಳಿದ್ದೆನು. ಈ ಜನ್ಮದಲ್ಲೂ ನಿಮಗೆ ಮಗನಾಗಿ ಜನಿಸಿ ಬಂದಿದ್ದೇನೆ. ಈ ವಿಷಯವನ್ನು ನಿಮಗೆ ತಿಳಿಸಲು ನನ್ನ ನಿಜರೂಪವನ್ನು ತೋರಿಸಿದೆನು. ಇನ್ನು ಮುಂದೆ ನಾನು ಹೇಳಿದಂತೆ ಕಾರ್ಯ ಪ್ರವೃತ್ತರಾಗಿ" ಎಂದು ಹೇಳಿ ಶ್ರೀಹರಿಯು ಸಾಮಾನ್ಯ ಮಗುವಾದನು.

ನಾರಾಯಣನ ಆಜ್ಞೆಯಂತೆ ವಸುದೇವನು ಮಗುವನ್ನು ಬುಟ್ಟಿಯಲ್ಲಿ ತೆಗೆದುಕೊಂಡು ಹೊರಗಡೆ ನೋಡಿದನು, ಕಾವಲುಗಾರರು ನಿದ್ರೆಯ ಮೋಡಿಯಲ್ಲಿದ್ದರು. ಇದ್ದಕ್ಕಿದ್ದಂತೆ ಕಾರಾಗೃಹದಲ್ಲಿ ಬೆಳಕು ಪಸರಿಸಿತು. ಸೆರೆಮನೆಯ ಬಾಗಿಲಿನ ಸರಪಣಿಗಳು ಕಳಚಿ ಬಿದ್ದವು. ಬೀಗವು ಮುರಿದು ಬಿದ್ದಿತು. ತೆರೆದ ಬಾಗಿಲಿನಿಂದ ವಸುದೇವನು ಮಗುವಿದ್ದ ಬುಟ್ಟಿಯನ್ನು ತಲೆಯ ಮೇಲೆ ಇಟ್ಟುಕೊಂಡು ಹೊರಬಂದನು. ಹೊರಗಡೆ ಧಾರಾಕಾರ ಮಳೆ ಸುರಿಯುತ್ತಿತ್ತು. ಆದಿಶೇಷನು ತನ್ನ ಹೆಡೆಯನ್ನು ತೆರೆದು ಮಗುವಿಗೆ ಮಳೆ, ಗಾಳಿ ಬೀಳದಂತೆ ತಡೆದನು. ಗೋಕುಲಕ್ಕೆ ತೆರಳುವಾಗ ತುಂಬಿ ಹರಿಯುತ್ತಿದ್ದ ಯಮುನೆಯು ವಸುದೇವನಿಗೆ ತೊಂದರೆಯಾಗದಂತೆ ದಾರಿ ಬಿಟ್ಟಳು. ವಸುದೇವನು ನಿರಾಯಾಸನಾಗಿ ನಂದಗೋಕುಲಕ್ಕೆ ಬಂದನು. ಅಲ್ಲಿಯೂ ಎಲ್ಲರೂ ಗಾಢನಿದ್ರೆಯಲ್ಲಿದ್ದರು. ವಸುದೇವನು ನೇರವಾಗಿ ಒಳಹೋಗಿ ಯಶೋದೆಯ ಪಕ್ಕದಲ್ಲಿ ಮಲಗಿದ್ದ ಹೆಣ್ಣುಮಗುವನ್ನು ತೆಗೆದುಕೊಂಡು, ತನ್ನ ಮಗುವನ್ನು ಆಕೆಯ ಪಕ್ಕದಲ್ಲಿಟ್ಟನು. ನಂತರ ಸರಸರನೆ ಕಾರಾಗೃಹಕ್ಕೆ ಹಿಂತಿರುಗಿ ಬಂದನು. ಮರಳಿ ಬರುವಾಗ ಮೊದಲಿನಂತೆ ಕಾರಾಗೃಹದ ಬಾಗಿಲುಗಳು ಮುಚ್ಚಿಕೊಂಡವು. ಸರಪಣಿಗಳು ಬಿಗಿದುಕೊಂಡವು; ಬೀಗವೂ ಹಾಕಲ್ಪಟ್ಟಿತು. ಆಗ ಮಗು ಅಳತೊಡಗಿ ಕಾವಲುಭಟರಿಗೆ ಎಚ್ಚರವಾಯಿತು. ಅವರು ಕಂಸನಿಗೆ ಸುದ್ದಿಯನ್ನು ತಿಳಿಸಿದರು.

ಸುದ್ದಿ ತಿಳಿದ ಕಂಸನು ಮೈಮೇಲಿನ ವಸ್ತ್ರದ ಪರಿವೆಯಿಲ್ಲದೆ ಖಡ್ಗಧಾರಿಯಾಗಿ ಸೆರೆಮನೆಗೆ ಬಂದನು. ದೇವಕಿಯ ಪಕ್ಕದಲ್ಲಿದ್ದ ಹೆಣ್ಣುಮಗುವನ್ನು ಕೈಯಲ್ಲಿ ಹಿಡಿದು ನೆಲಕ್ಕೆ ಅಪ್ಪಳಿಸಬೇಕು ಎನ್ನುವಷ್ಟರಲ್ಲಿ ಅದು ಕಂಸನ ಕೈಯಿಂದ ಜಾರಿಕೊಂಡು ಆಕಾಶಕ್ಕೆ ನೆಗೆಯಿತು. ಆ ಮಗುವೇ ಯೋಗಮಾಯೆಯಾಗಿದ್ದಳು. ಆಕೆ ತನ್ನ ನಿಜರೂಪದಿಂದ ಕಾಣಿಸಿಕೊಂಡು, "ಎಲೈ ಮೂರ್ಖ ಕಂಸನೇ! ನಿನ್ನನ್ನು ಸಂಹರಿಸುವ ಮಗುವು ಈಗಾಗಲೇ ಜನಿಸಿದೆ. ಇನ್ನಾದರೂ ಸಾತ್ವಿಕನಾಗಿ ಬಾಳು!" ಎಂದು ಹೇಳಿ ಅದೃಶ್ಯಳಾದಳು. ಇಂದಿಗೂ ಹಲವೆಡೆ ಆಕೆ ಭಕ್ತಜನರಿಂದ ವಿವಿಧ ರೂಪಗಳಲ್ಲಿ ದುರ್ಗಾಮಾತೆಯಾಗಿ ಪೂಜಿಸಲ್ಪಡುತ್ತಿದ್ದಾಳೆ.

ಯೋಗಮಾಯೆಯ ನುಡಿಗಳನ್ನು ಕೇಳಿದ ಕಂಸನು ಬೆದರಿದನು. ಇಲ್ಲಿಯತನಕ ತಾನು ಮಾಡಿದ ಶಿಶುಹತ್ಯೆಗಳೆಲ್ಲ ನಿರರ್ಥಕವಾದವೆಂದು ಅವನು ಭಾವಿಸಿದನು. ದೇವಕಿ, ವಸುದೇವರನ್ನು ಸೆರೆಮನೆಯಿಂದ ಬಿಡಿಸಿದನು. ಅವರಿಬ್ಬರನ್ನು ಬೇರೆ ಬೇರೆ ಅರಮನೆಗಳಲ್ಲಿ ಇರಿಸಿದನು. ಕೂಡಲೇ ರಾಜಸಭೆಯನ್ನು ಕರೆದು, ನಡೆದ ವಿಷಯವನ್ನು ತಿಳಿಸಿದನು. ಅವನ ಆಸ್ಥಾನಮಂತ್ರಿಯಾದ ದುರ್ಬೋಧ ಶಿಖಾಮಣಿಯು, "ಮಹಾರಾಜ, ಈ ಎರಡು ಮೂರು ದಿವಸ ಅಥವಾ ಹತ್ತು–ಹನ್ನೆರಡು ದಿನಗಳಲ್ಲಿ ರಾಜ್ಯದ ಎಲ್ಲ ಊರುಗಳಲ್ಲಿ ಜನಿಸಿದ ಮಕ್ಕಳನ್ನು ಸಂಹರಿಸಲು ಆಜ್ಞೆ ಮಾಡು. ಆಗ ನಿನಗೆ ಯಾರ ಭಯವೂ ಇರುವುದಿಲ್ಲ. ವಿಷ್ಣುವಿನ ಹೊರತು ಬೇರೆ ದೇವತೆಗಳು ನಿನ್ನನ್ನು ಕಂಡು ಹೆದರಿದ್ದಾರೆ. ಶ್ರೀಹರಿಯು ಗೋಬ್ರಾಹ್ಮಣ ಪ್ರತೀಕನಾಗಿದ್ದಾನೆ. ಆದ್ದರಿಂದ ಬ್ರಾಹ್ಮಣರು, ಋಷಿಮುನಿಗಳು, ಗೋವುಗಳು ಮತ್ತು ಅವರು ನಡೆಸುವ ಯಜ್ಞಯಾಗಾದಿಗಳನ್ನು ಧ್ವಂಸಗೊಳಿಸು" ಎಂದು ಸಲಹೆಕೊಟ್ಟನು. ಈ ಸಲಹೆಯು ಕಂಸನಿಗೆ ಪ್ರಿಯವೆನಿಸಿತು. ಅವನು ಅವರ ಈ ಸಲಹೆಯನ್ನೇ ಶಾಸನ ಮಾಡಿದನು. ಇದಕ್ಕೆ ದಕ್ಷರಾದ ಯೋಗ್ಯ ಸೈನಿಕ ಪಡೆಯನ್ನೇ ಮೀಸಲಿಟ್ಟನು.

### ಶ್ರೀಕೃಷ್ಣನ ಬಾಲ್ಯ

ಹೆರಿಗೆಯ ಆಯಾಸದಿಂದಾಗಿ ತನಗೆ ಜನಿಸಿದ್ದ ಮಗುವು ಗಂಡೋ ಅಥವಾ ಹೆಣ್ಣೋ ಎಂಬುದನ್ನು ಯಶೋದೆಯು ಅರಿತಿರಲಿಲ್ಲ. ಅವಳು ಆಯಾಸ, ಬಳಲಿಕೆಗಳಿಂದಾಗಿ ನಿದ್ರೆಯ ಮಡಿಲಿಗೆ ಜಾರಿದಳು. ಮರುದಿನ ತನ್ನ ಮಡಿಲಲ್ಲಿ ದಿವ್ಯಲಕ್ಷಣಯುತವಾದ ಗಂಡುಮಗುವನ್ನು ಕಂಡು ಸಂತಸಗೊಂಡಳು. ಮಗುವನ್ನು ಕಂಡ ನಂದಗೋಪನು, ಸುದ್ದಿಯನ್ನು ನಂದಗೋಕುಲದ ದಶದಿಕ್ಕುಗಳಿಗೂ ತಲುಪಿಸಿದನು. ಗೋಕುಲದ ಸ್ತ್ರೀಪುರುಷರೆಲ್ಲರೂ ನಂದಗೋಪನ ಮನೆಯಲ್ಲಿ ನೆರೆದರು. ಮಗುವು ಜನಿಸಿದ ಕಾಲಕ್ಕೆ ನಡೆಯಬೇಕಾದ ಧಾರ್ಮಿಕ ಆಚರಣೆಗಳು– ಬ್ರಾಹ್ಮಣರಿಗೆ, ಬಡಬಗ್ಗರಿಗೆ ಗೋದಾನ, ಭೂದಾನ, ವಸ್ತ್ರದಾನ, ಸುವರ್ಣದಾನ ಇನ್ನಿತರ ಕಾರ್ಯಗಳು– ಯಶಸ್ವಿಯಾಗಿ ನಡೆದವು. ಗಾಯಕರು ಗಾನ ಮಾಡಿದರು, ನಗಾರಿ ದುಂದುಭಿ ಮೊದಲಾದ ಮಂಗಳ ವಾದ್ಯಗಳು ಮೊಳಗಿದವು. ಒಟ್ಟಿನಲ್ಲಿ ಇಡೀ ನಂದಗೋಕುಲದ ಪ್ರತಿ ಗೃಹದಲ್ಲಿಯೂ ಹಬ್ಬದ ವಾತಾವರಣ ಉಂಟಾಯಿತು.

ಕಂಸನ ಮಾಂಡಲಿಕನಾದ ನಂದಗೋಪನು ಮಹಾರಾಜನಿಗೆ ಸಲ್ಲಿಸಬೇಕಾದ ಕಪ್ಪಕಾಣಿಕೆಗಳನ್ನು ತೆಗೆದುಕೊಂಡು ಆಸ್ಥಾನಕ್ಕೆ ಬಂದನು. ಹಾಗೆಯೇ ಅವನು ವಸುದೇವನನ್ನು ಕಂಡನು. ವಸುದೇವನು ನಂದಗೋಪನಿಗೆ, 'ಮುಪ್ಪಿನ ಕಾಲದಲ್ಲಿ ನಿನಗೆ ಹುಟ್ಟಿದ ಮಗ, ಹಾಗೂ ನನ್ನ ಹೆಂಡತಿ ರೋಹಿಣಿ ಹೆತ್ತ ಮಗ ಇಬ್ಬರೂ ಕ್ಷೇಮದಿಂದಿರುವರೆ?' ಎಂದು ವಿಚಾರಿಸಿದನು. ಆ ಮಕ್ಕಳಿಬ್ಬರೂ ಕ್ಷೇಮದಿಂದಿರುವರು ಎಂಬ ವಿಷಯವನ್ನು ನಂದಗೋಪನು ತಿಳಿಸಿದನು. ತಾನು ಇಲ್ಲದಾಗ ನಂದಗೋಕುಲದಲ್ಲಿ ತೊಂದರೆಯಾದೀತೆಂದು ಹೆದರಿದ ನಂದಗೋಪನು ವಸುದೇವನ ಅಪ್ಪಣೆ ಪಡೆದು ಕೂಡಲೇ ಗೋಕುಲಕ್ಕೆ ಹಿಂತಿರುಗಿದನು.

ತನ್ನ ರಾಜ್ಯದ ಎಲ್ಲ ಮಕ್ಕಳನ್ನೂ ಕಂಸನು ಕೊಂದನು. ಕೆಲವು ದಿವಸಗಳ ಹಿಂದೆ ನಂದಗೋಕುಲದಲ್ಲಿ ಒಂದು ಗಂಡು ಶಿಶುವು ಜನಿಸಿತ್ತೆಂಬ ವಿಷಯ ಅವನಿಗೆ ತಿಳಿದುಬಂತು. ಆದರೆ ಅಲ್ಲಿಗೆ ಸೈನಿಕರನ್ನು ಕಳುಹಿಸದೆ, ಶಕ್ತಿಗಿಂತ ಯುಕ್ತಿಯಿಂದಲೇ ಕೆಲಸವನ್ನು ಸಾಧಿಸಬೇಕೆಂದು, ವಿಷಪೂರಿತ

ಸ್ತನಗಳುಳ್ಳ ಪೂತನಿ ಎಂಬ ದೈತ್ಯಸ್ತ್ರೀಯನ್ನು ನಂದಗೋಕುಲಕ್ಕೆ ಕಳುಹಿಸಿದನು. ಪೂತನಿಯು ಗೋಪಿಕಾಸ್ತ್ರೀಯ ವೇಷ ಧರಿಸಿ, ಸೊಗಸಾದ ಸೀರೆಯುಟ್ಟುಕೊಂಡು, ಹೂಮಾಲೆ ಮುಡಿದು, ಮಂದಹಾಸ ಬೀರುತ್ತಾ ನಂದಗೋಕುಲದಲ್ಲಿನ ನಂದಗೋಪನ ಮನೆಗೆ ಬಂದಳು. ಯಶೋದೆಯ ಮಡಿಲಿನಲ್ಲಿದ್ದ ಮಗುವನ್ನು ಎತ್ತಿಕೊಂಡು ಮುದ್ದಾಡಿದಳು. ಮಗುವಿಗೆ ಹಾಲು ಕುಡಿಸಲು ತೊಡೆಯ ಮೇಲೆ ಮಲಗಿಸಿಕೊಂಡು, ತನ್ನ ಸ್ತನವನ್ನು ಶಿಶುವಿನ ಬಾಯಿಗೆ ಇಟ್ಟಳು. ಸರ್ವಜ್ಞನಾದ ಶಿಶುರೂಪದಲ್ಲಿರುವ ಪರಮಾತ್ಮನಿಗೆ ಪೂತನಿಯ ಕುತಂತ್ರ ತಿಳಿಯದಿದ್ದೀತೆ? ಆಕೆಯ ಸ್ತನವನ್ನು ಹಿಡಿದುಕೊಂಡು ಶಿಶುರೂಪದ ಭಗವಂತನು ವಿಷಯುಕ್ತ ಹಾಲನ್ನು ಹೀರುವುದರ ಬದಲಿಗೆ ಅವಳ ಪ್ರಾಣವನ್ನೇ ಹೀರಿದನು. "ಅಯ್ಯೋ..! ಬಿಡು.. ಸತ್ತೆ!" ಎನ್ನುತ್ತಾ ಆ ಪೂತನಿ ತನ್ನ ನಿಜರೂಪದಿಂದ ಸತ್ತು ಬಿದ್ದಳು. ಆಕೆಯ ದೇಹದ ಮೇಲೆ ಬಿದ್ದ ಮಗುವು ಆಟವಾಡುತ್ತಿತ್ತು. ಕೂಡಲೇ ಯಶೋದೆಯು ಮಗುವನ್ನು ಎತ್ತಿಕೊಂಡು ತನ್ನ ಮೊಲೆಯನ್ನುಣಿಸಿ, ಮಲಗಿಸಿದಳು. ನಂತರ ಅದರ ಅಂಗಾಂಗಳಿಗೆಲ್ಲಾ ಹಿರಿಯರ ಸಲಹೆಯಂತೆ ವಿಷ್ಣುಕವಚವನ್ನು ಮಾಡಿದಳು. ಇಡೀ ಮನೆಯನ್ನೇ ಆವರಿಸಿದ್ದ ಪೂತನಿಯ ದೈತ್ಯದೇಹವನ್ನು ಗೋಪಾಲಕರು ಕಡಿದು ತುಂಡಾಗಿ ಕತ್ತರಿಸಿ ಊರ ಹೊರಗೆ ಹಾಕಿದರು.

ಪೂತನಿಯು ವಿಕಾರವಾಗಿ ಸತ್ತಳೆಂಬ ಸುದ್ದಿ ತಿಳಿದ ಕಂಸನು ಚಿಂತಾಕ್ರಾಂತನಾದನು. ಆಗ ಶಕಟಾಸುರನೆಂಬ ದೈತ್ಯನು ಮುಂದೆ ಬಂದನು. ನಂದಗೋಕುಲಕ್ಕೆ ಅವನು ಗಾಡಿಯ ರೂಪದಲ್ಲಿ ಬಂದು, ಹೊರಗೆ ಮಲಗಿದ್ದ ಮಗುವಿನ ಮೇಲೆ ಹಾಯ್ದನು. ಆ ಮಗುವು ಸಾಮಾನ್ಯ ಮಗುವೇನೂ ಆಗಿರಲಿಲ್ಲವಲ್ಲ. ತನ್ನ ಕಾಲನ್ನು ಪಟಪಟನೆ ಬಡೆಯಿತು. ಆ ಪುಟ್ಟ ಕಾಲಿನ ಹೊಡೆತವು ಆ ಗಾಡಿಗೆ ತಗುಲಿ, ಅದು ಪುಡಿಪುಡಿಯಾಗಿ, ರಾಕ್ಷಸ ರೂಪದಿಂದ ಶಕಟಾಸುರನು ಅಸು ನೀಗಿದನು.

ಶಕಟಾಸುರನೂ ಹತನಾದನೆಂದು ತಿಳಿದ ಕಂಸನು ಬೆಚ್ಚಿ ಬೆದರಿದನು. ಕಂಸನ ಆತಂಕವನ್ನು ಹೋಗಲಾಡಿಸಲು ಮುಂದಾದ ತೃಣಾವರ್ತನೆಂಬ ದೈತ್ಯನು, ಶಿಶುವಿನ ಸಮಸ್ಯೆಯನ್ನು ತಾನು ಬಗೆಹರಿಸುವೆನೆಂದು ಅವನಿಗೆ ಅಭಯವನ್ನಿತ್ತನು. ಯಶೋದೆಯು ಮಗುವಿಗೆ ಹಾಲುಣಿಸಿ, ಲಾಲಿ ಹಾಡಿ, ಕೋಣೆಯಲ್ಲಿ ಮಲಗಿಸಿ, ತನ್ನ ಗೃಹಕೃತ್ಯದಲ್ಲಿ ತೊಡಗಿಕೊಂಡಳು. ಅಷ್ಟರಲ್ಲಿ ಅಲ್ಲಿಗೆ ತೃಣಾವರ್ತನು ಮಾಯವಾಗಿ ಗಾಳಿಯ ರೂಪದಲ್ಲಿ ಬಂದು, ಸುಂಟರಗಾಳಿಯನ್ನು ಎಬ್ಬಿಸಿದನು. ಸುಂಟರಗಾಳಿಯ ಮೂಲಕ ಮಗುವನ್ನು ಎತ್ತಿಕೊಂಡು, ಮೇಲಕ್ಕೆ ಕೊಂಡೊಯ್ದು ಗಾಳಿಯಲ್ಲಿ ನಿಲ್ಲಿಸಿಬಿಟ್ಟನು. ಮಗು ಕೆಳಕ್ಕೆ ಬಿದ್ದರೆ, ಅದು ಸಾಯುವುದೆಂದು ಅವನು ಭಾವಿಸಿದನು. ಆದರೆ ಶಿಶುವಿನ ವೇಷದಲ್ಲಿದ್ದ ಭಗವಂತನು ಆತನ ಕೊರಳಿಗೆ ಜೋತು ಬಿದ್ದನು. ತೃಣಾವರ್ತನು ಉಸಿರುಕಟ್ಟಿ ಪ್ರಾಣಬಿಟ್ಟು ನೆಲದ ಮೇಲೆ ತನ್ನ ದೈತ್ಯ ದೇಹದೊಂದಿಗೆ ಬಿದ್ದು ಮರಣವನ್ನಪ್ಪಿದನು. ನಂದಗೋಪನು ಮಗನ ಹಾಗೂ ತನ್ನ ಕುಟುಂಬಕ್ಕೆ ಏನೂ ಕೇಡಾಗದಂತೆ ಯಜ್ಞಯಾಗಾದಿಗಳನ್ನೂ, ಅಷ್ಟದಿಗ್ಬಂಧನಗಳನ್ನೂ ಮಾಡಿಸಿದನು. ಬಡಬಗ್ಗರಿಗೂ, ಬ್ರಾಹ್ಮಣರಿಗೂ ಗೋದಾನ, ಸುವರ್ಣದಾನಗಳನ್ನು ಮಾಡಿದನು.

ನಂದಗೋಕುಲದಲ್ಲಿ ಬೆಳೆಯುತ್ತಿರುವ ರೆಂದು ತನ್ನ ಮಕ್ಕಳಿಬ್ಬರಿಗೂ ನಾಮಕರಣ ಶಾಸ್ತ್ರ ಮಾಡಿಸಬೇಕೆಂದು ವಸುದೇವನು ನಿರ್ಧರಿಸಿದನು. ಅದನ್ನು ತನ್ನ ಕುಲ ಪುರೋಹಿತರಾದ ಗರ್ಗಋಷಿಗಳೇ ಅದನ್ನು ಮಾಡಬೇಕೆಂದು ಅವನು ಬಯಸಿದನು. ಕಂಸನ ಭಯದಿಂದಾಗಿ ಗೌಪ್ಯವಾಗಿ ಅವರನ್ನು ನಂದಗೋಕುಲಕ್ಕೆ ಕಳುಹಿಸಿದನು. ನಂದಗೋಪನ ಮನೆಗೆ ಬಂದ ಗರ್ಗರಿಗೆ ನಂದಗೋಪನು ಸ್ವಾಗತಿಸಿ ಸತ್ಕರಿಸಿದನು. ಅವರಿಗೆ ಸಾಷ್ಟಾಂಗ ನಮಸ್ಕರಿಸಿ, 'ತನ್ನ ಮಕ್ಕಳಿಗೆ ನಾಮಕರಣ ಮಾಡಿ' ಎಂದು ಅವರನ್ನು ವಿನಂತಿಸಿದನು. ಸಂದರ್ಭದ ಸೂಕ್ಷ್ಮತೆಯನ್ನು ಗಮನಿಸಿದ ಗರ್ಗರು ಕಂಸನಿಗೆ ತಿಳಿಯದಂತೆ ನಾಮಕರಣ ಮಾಡಿಸಬೇಕೆಂದು ಹೇಳಿದನು. ವೇದಮಂತ್ರ ಘೋಷಗಳೊಂದಿಗೆ ರೋಹಿಣಿಯ ಪುತ್ರನಿಗೆ ಬಲರಾಮನೆಂದೂ, ಯಶೋದೆಯ ಮಗನಿಗೆ ಕೃಷ್ಣನೆಂದೂ ನಾಮಕರಣ ಮಾಡಿದರು. ನಂತರ ಯಾರಿಗೂ ತಿಳಿಯದಂತೆ ಮಥುರಾ ಪಟ್ಟಣಕ್ಕೆ ಗರ್ಗರು ಹಿಂತಿರುಗಿದರು. ಬಲರಾಮ-ಕೃಷ್ಣರು ನೋಡನೋಡುತ್ತಿದ್ದಂತೆಯೇ ಬೆಳೆದು ಬಾಲಕರಾದರು. ಕೃಷ್ಣನು ಗೋಪಾಲಕರ ಗುಂಪು ಕಟ್ಟಿದನು. ಅವರು ಕೊಟ್ಟಿಗೆಗೆ ಹೋಗಿ ಕಟ್ಟಿದ್ದ ದನಕರುಗಳನ್ನು ಬಿಚ್ಚುವರು; ಗೋಪಿಕಾಸ್ತ್ರೀಯರ ಮನೆಗೆ ನುಗ್ಗಿ ಅವರಿಗೆ ತಿಳಿಯದಂತೆ ಕಳ್ಳತನದಿಂದ ಹಾಲು, ಮೊಸರು, ಬೆಣ್ಣೆ, ತುಪ್ಪ ತಿಂದು ಗೆಳೆಯರಿಗೂ ತಿನ್ನಿಸುತ್ತಾ ತುಂಟತನ ಮಾಡುತ್ತಿದ್ದರು. ಗೋಪಿಕಾಸ್ತ್ರೀಯರು ಕೃಷ್ಣನ ತುಂಟಾಟದ ಪರಿವೆಯನ್ನು ತಾಯಿಯಾದ ಯಶೋದೆಯಲ್ಲಿ ದೂರು ಹೇಳುತ್ತಿದ್ದರು. ಕೃಷ್ಣನನ್ನು ಯಶೋದೆಯು ವಿಚಾರಿಸಿದರೆ, ಮುಗ್ಧನಂತೆ ಅವನು, ತಾನು ತುಂಟಾಟ ಮಾಡಿಲ್ಲವೆಂದು ಹೇಳುತ್ತಿದ್ದನು. ಆ ಮೋಡಿಯ ಮಾತಿಗೆ ಮರುಳಾಗಿ ಯಶೋದೆಯು ಕೃಷ್ಣನನ್ನು ಆಲಂಗಿಸಿಕೊಂಡು, ಗೋಪಿಕಾಸ್ತ್ರೀಯರನ್ನೇ ಬೈದು ಕಳುಹಿಸುತ್ತಿದ್ದಳು. ◆




# ಸ್ವಾಮಿ ವಿವೇಕಾನಂದರು ನಿರೂಪಿಸಿದ

# ನೀತಿಕಥೆಗಳು

ಡಾ. ಕೆ. ಅನಂತರಾಮು

## ಗೋಪಾಲಕನ ಆತ್ಮದರ್ಶನ

ಆತ್ಮಸಾಕ್ಷಾತ್ಕಾರಕ್ಕಿರುವ ಮಾರ್ಗವೇನು ಎಂಬ ಪ್ರಶ್ನೆ ಎದ್ದುಕೊಂಡಾಗ "ಸದ್ಗುರುವೊಬ್ಬನು ನಮಗೆ ಬೇಕು" ಎಂಬ ಉತ್ತರ ಸಿದ್ಧವಾಗುತ್ತದೆ. ಆ ಸದ್ಗುರುವಿನ ಉಪದೇಶವಾಕ್ಯಗಳಲ್ಲಿ ನಮ್ಮ ಶ್ರದ್ಧೆ ಬಲಯುತವಾಗಿದ್ದರೆ, ಅವನು ಹೇಳಿದಂತೆ ಸಾಧನೆ ಮಾಡಿದರೆ, ನಮ್ಮೊಳಗೇ ಇರುವ, ಗುರುವಿನ ಗುರು ಭಗವಂತನೇ ಮಾತನಾಡುತ್ತಾನೆ. ಶಾಶ್ವತವಾದ ಜ್ಞಾನವು ನಮ್ಮ ಹೃದಯದಲ್ಲಿಯೇ ಸ್ಫುರಿಸುತ್ತದೆ. ವಿವೇಕಾನಂದರ ವಾಕ್ಯಗಳಲ್ಲೇ ಹೇಳುವುದಾದರೆ "ಅಂತಹ ವ್ಯಕ್ತಿಗೆ ಯಾವುದೇ ಗ್ರಂಥದ ಆವಶ್ಯಕತೆಯಿಲ್ಲ. ಯಾವುದೇ ಚರ್ಚು-ದೇವಾಲಯಗಳಿಗೆ ಅವನು ಹೋಗಬೇಕಾಗಿಲ್ಲ, ಯಾವ ದೇವತೆಯನ್ನೂ ಆಶ್ರಯಿಸಬೇಕಾಗಿಲ್ಲ, ಯಾವ ಯಕ್ಷಗಂಧರ್ವರ ಉಪದೇಶವನ್ನೂ ಆಲಿಸಬೇಕಾಗಿಲ್ಲ. ಭಗವಂತನೇ ಅವನಿಗೆ ಗುರುವಾಗುತ್ತಾನೆ. ಅವನು ತನ್ನಿಂದಲೇ ತನಗೆ ಬೇಕಾದುದನ್ನೆಲ್ಲಾ ಪಡೆದುಕೊಳ್ಳುತ್ತಾನೆ. ಅವನ ದೇಹವೇ ಪವಿತ್ರ ದೇವಾಲಯವಾಗಿ ಅದರಲ್ಲಿ ಸೃಷ್ಟಿಕರ್ತನಾದ ಭಗವಂತನು ವಾಸಮಾಡುತ್ತಾನೆ". ಈ ತತ್ತ್ವವನ್ನು ಉಪದೇಶಿಸುವ ಸಂದರ್ಭದಲ್ಲಿ ಸ್ವಾಮಿ ವಿವೇಕಾನಂದರು ಸಾಧಾರಣ ದನಗಾಹಿಯೊಬ್ಬನು ತನ್ನ ದೇಹವನ್ನೇ ದೇವಾಲಯವಾಗಿಸಿಕೊಂಡು, ಭಗವಂತನನ್ನು ಪ್ರತಿಷ್ಠಾಪಿಸಿಕೊಂಡ ಕಥೆಯನ್ನು ನಿರೂಪಿಸಿದ್ದಾರೆ.

ಒಂದು ಅರಣ್ಯದಲ್ಲಿ ಹರಿಯುತ್ತಿದ್ದ ನದಿಯ ತೀರದಲ್ಲಿ ನಯನಾಭಿರಾಮವಾದ ಪ್ರಕೃತಿಸೌಂದರ್ಯವು ಮೆರೆಯುತ್ತಿತ್ತು. ಅಲ್ಲಿ ಯೋಗಿಮಹಾತ್ಮರೊಬ್ಬರು ಆಶ್ರಮವೊಂದನ್ನು ಕಟ್ಟಿಕೊಂಡು ತಪಸ್ಸು ಮಾಡುತ್ತಿದ್ದರು. ಸಮೀಪದ ಗ್ರಾಮದಿಂದ ಗೋಪಾಲಕನೊಬ್ಬನು ತನ್ನ ದನಕರುಗಳನ್ನು ಮೇಯಿಸಲು ನಿತ್ಯವೂ ಅದೇ ಅರಣ್ಯಪ್ರದೇಶಕ್ಕೆ ಬರುತ್ತಿದ್ದನು. ಅವನು ಆ ಯೋಗಿವರ್ಯರನ್ನು ನಿತ್ಯವೂ ದೂರದಿಂದಲೇ ನೋಡುತ್ತಿದ್ದನು. ಅವರು ಗಂಟೆಗಟ್ಟಳೆ ಧ್ಯಾನನಿರತರಾಗುವುದನ್ನೂ ಗ್ರಂಥಗಳನ್ನು ಅಧ್ಯಯನ ಮಾಡುವುದನ್ನೂ ಅವನು ಕುತೂಹಲ ತುಂಬಿದ ಕಣ್ಣುಗಳಿಂದ ವೀಕ್ಷಿಸುತ್ತಿದ್ದನು. ಆ ಗೋಪಾಲಕನಿಗೆ ಸಹಜವಾಗಿಯೇ ದೇವರ ವಿಷಯದಲ್ಲಿ ನಿರ್ಮಲವಾದ ಭಕ್ತಿಯಿತ್ತು. ಆ ದೇವರನ್ನು ಒಲಿಸಿಕೊಂಡ ಭಕ್ತರ ಕಥೆಗಳೂ ಅವನ ಕಿವಿಯ ಮೇಲೆ ಬಿದ್ದಿದ್ದವು. "ನಾನೂ ದೇವರನ್ನು ನೋಡಬೇಕು, ಅವನನ್ನು ಒಲಿಸಿಕೊಳ್ಳಬೇಕು" ಎಂಬ ತುಡಿತಕ್ಕೆ ಅವನು ತುತ್ತಾಗಿದ್ದನು. ಅದಕ್ಕೇನು ಮಾರ್ಗ ಎಂಬುದನ್ನರಿಯದೆ ತನ್ನ ಮನದಲ್ಲಿಯೇ ತೊಳಲಾಡುತ್ತಿದ್ದನು.

"ಈ ಯೋಗಿಮಹಾತ್ಮರು ನನಗೆ ದಾರಿ ತೋರಿಸಿಯಾರು" ಎಂದುಕೊಂಡು ಆ ಗೋಪಾಲಕನು ಒಂದು ದಿನ ಆ ಅರಣ್ಯಪ್ರಾಂತದಲ್ಲಿ ದನಗಳನ್ನು ಮೇಯಲು ಬಿಟ್ಟು, ಅಳುಕುತ್ತಲೇ ಆ ಯೋಗೀಶ್ವರರ ಆಶ್ರಮವನ್ನು ಹೊಕ್ಕು ಅವರಿಗೆ ಅಡ್ಡಬಿದ್ದನು. ಅವರು, "ಏನಪ್ಪಾ ಸಮಾಚಾರ?" ಎಂದರು. "ಸ್ವಾಮಿ, ನಾನು ದೇವರನ್ನು ನೋಡಬೇಕೆಂದಿದ್ದೇನೆ, ಅವನನ್ನು ಒಲಿಸಿಕೊಳ್ಳಬೇಕೆಂದಿದ್ದೇನೆ. ಅದಕ್ಕಾಗಿ ಏನು ಮಾಡಬೇಕು ಎಂಬುದನ್ನು ದಯಮಾಡಿ ನನಗೆ ತಿಳಿಸಿಕೊಡಿ" ಎಂದು ಆರ್ತನಾಗಿ ಬೇಡಿಕೊಂಡನು. ಯೋಗೀಶ್ವರರಾದರೋ, "ನೀನೊಬ್ಬ ಸಾಮಾನ್ಯ ದನಗಾಹಿ, ದೇವರನ್ನು ನೀನು ಅರ್ಥಮಾಡಿಕೊಳ್ಳಲಾರೆ, ಅವನನ್ನು ಪಡೆದುಕೊಳ್ಳಲಾರೆ, ಪಶುಪಾಲನೆಯ ನಿನ್ನ ಕಾರ್ಯವನ್ನು ಮಾಡಿಕೊಂಡು ನೆಮ್ಮದಿಯಿಂದಿರು, ದೇವರ ಗೊಡವೆ ನಿನಗೆ ಬೇಡ" ಎಂದು ಅವನ ಉತ್ಸಾಹಕ್ಕೆ ತಣ್ಣೀರೆರಚಿ ಕಳುಹಿಸಿಬಿಟ್ಟರು. ಗೋಪಾಲಕನು ನಿರಾಶನಾಗಿ ಹಿಂದಕ್ಕೆ ಬಂದನು. ಆದರೆ ದೇವರನ್ನು ಕಾಣುವ ಆತುರವು ಮಾತ್ರ ತಗ್ಗದೆ ಅದು ಇನ್ನಷ್ಟು ಉಜ್ವಲವಾಯಿತು. ದೇವರನ್ನು ಕಂಡ ಹೊರತು ತನಗೆ ಶಾಂತಿ ಸಮಾಧಾನಗಳಿಲ್ಲ ಎಂಬ ಪರಿಸ್ಥಿತಿಯನ್ನು ಅವನು ಮುಟ್ಟಿದನು.

ಹೀಗೆಯೇ ದಿನಗಳು ಉರುಳುತ್ತಿರುವಾಗ ಆ ಗೋಪಾಲಕನು, ಮತ್ತೊಂದು ದಿನ ಯೋಗೀಶ್ವರರನ್ನು ಸಮೀಪಿಸಿ, ಅವರ ಮುಂದೆ ಮಂಡಿಯೂರಿ ಕುಳಿತು, "ಸ್ವಾಮಿ, ನಾನು ದೇವರನ್ನು ಕಾಣುವ ವಿಚಾರವಾಗಿ ತಾವು ದಾರಿ ತೋರಲೇಬೇಕು" ಎಂದು ಒತ್ತಾಯಪೂರ್ವಕವಾಗಿ ಗೋಗರೆದನು. ಆಗ ಯೋಗೀಶ್ವರರು, "ಅಯ್ಯೋ, ನೀನೊಬ್ಬ ಮುಗ್ಧಹುಡುಗ. ನೀನೆಂದರೇನು, ದೇವರೆಂದರೇನು? ಅದರ ಬಗ್ಗೆ ತಲೆಕೆಡಿಸಿಕೊಳ್ಳಲೇಬೇಡ, ನಿನ್ನ ಕೆಲಸ ನೀನು ಮಾಡಿಕೊಂಡು ನೆಮ್ಮದಿಯಿಂದಿರು" ಎಂದು ಹಿಂದಿನಂತೆಯೇ ಉತ್ಸಾಹಭಂಗಮಾಡಿ ಹಿಂದಕ್ಕೆ ಅಟ್ಟಿಬಿಟ್ಟರು.

ಗೋಪಾಲಕನಿಗಾದರೋ ದೇವರನ್ನು ಪಡೆಯುವ ಹಂಬಲವು ಹೆಮ್ಮರವಾಗಿ ಬೆಳೆದುಬಿಟ್ಟಿತು. ಅವನಿಗೆ ಅನ್ನಾಹಾರಗಳು ರುಚಿಸದಾದವು, ಕಣ್ಣಿಗೆ ನಿದ್ರೆ ಹತ್ತದಾಯಿತು. "ನಾನು ದೇವರನ್ನು ಕಾಣಲೇಬೇಕು" ಎಂದು ಕಣ್ಣೀರು ಹರಿಸುತ್ತಾ ಮೂರನೆಯ ಬಾರಿಗೆ ಬಂದು, ಯೋಗೀಶ್ವರರ ಪಾದಗಳ ಮೇಲೆ ಬಿದ್ದು, ಅಶ್ರುಜಲಾಭಿಷೇಕ ಮಾಡಿಬಿಟ್ಟನು. ಅವನ ಭಾವೋನ್ಮಾದವನ್ನು ಕಂಡ ಯೋಗೀಶ್ವರರ ಮನಸ್ಸು ಕರಗಿತು. ಆಗ ಯೋಗೀಶ್ವರರು, "ದೇವರ ವಿಚಾರವಾಗಿ ನೀನು ಏನು ತಿಳಿಯಬೇಕೆಂದಿದ್ದೀಯೋ ಅದನ್ನು ನನಗೆ ಹೇಳು" ಎಂದರು. ಆಗ ಗೋಪಾಲಕನು ಜೀವ ಬಂದಂತಾಗಿ, "ಸ್ವಾಮಿ, ದೇವರು ಹೇಗಿರುತ್ತಾನೆ, ಅವನ ರೂಪ ಯಾವುದು, ಅವನು ಎಲ್ಲಿರುತ್ತಾನೆ, ಅವನನ್ನು ನೋಡುವುದು ಹೇಗೆ?" ಎಂದು ಕಾತರತೆಯಿಂದ ಕೇಳಿದನು. ಆಗ ಯೋಗೀಶ್ವರರು, "ನೀನು ಮೇಯಿಸುತ್ತಿರುವ ದನಗಳ ಗುಂಪಿನಲ್ಲಿ ದೊಡ್ಡದೊಂದು ಗೂಳಿಬಸವನಿದೆಯಲ್ಲಾ,

ಅದರ ಹಾಗೆಯೇ ದೇವರ ರೂಪವೂ ಇದೆ. ಅದರಲ್ಲಿಯೇ ನೀನು ದೇವರನ್ನು ನೋಡಬಹುದು. ಅದನ್ನೇ ನೀನು ಧ್ಯಾನ ಮಾಡು, ಪೂಜೆ ಮಾಡು" ಎಂದು ಹೇಳಿ ಕಳುಹಿಸಿಕೊಟ್ಟರು.

ಯೋಗೀಶ್ವರರ ಉಪದೇಶದಿಂದ ಗೋಪಾಲಕನಿಗೆ ಪರಮಾನಂದವಾಯಿತು. "ನಾನು ಬಯಸುತ್ತಿರುವ ದೇವರು ನನ್ನ ನಡುವೆಯೇ ಇದ್ದಾನಲ್ಲಾ, ಅವನನ್ನು ನೋಡಲು ನಾನು ಎಲ್ಲೋ ದೂರಕ್ಕೆ ಹೋಗಬೇಕಾಗಿಲ್ಲವಲ್ಲ" ಎಂದು ಸಮಾಧಾನಪಟ್ಟುಕೊಂಡನು. ಯೋಗಿಮಹಾತ್ಮರ ಮಾತುಗಳಲ್ಲಿ ವಿಶ್ವಾಸವಿಟ್ಟು ತನ್ನ ಗೂಳಿಬಸವನನ್ನು ದೇವರೆಂದು ನಂಬಿ ಪೂಜಿಸತೊಡಗಿದನು. ಮೇಯಿಸಲು ಕಾಡಿಗೆ ಹೋದಾಗ, ಕೊಟ್ಟಿಗೆಯಲ್ಲಿ ಕಟ್ಟಿದಾಗ, ಹಗಲೆನ್ನದೆ-ರಾತ್ರಿಯೆನ್ನದೆ ಆ ಬಸವನ ಆರೈಕೆಯಲ್ಲಿಯೇ ಗೋಪಾಲಕನು ತನ್ಮಯನಾಗಿಬಿಟ್ಟನು. ಆ ಬಸವನಿಗೆ ಧೂಪದೀಪಗಳನ್ನು ಬೆಳಗಿಸುತ್ತಿದ್ದನು. ನಿರ್ಮಲವಾದ ನೀರನ್ನು ಕುಡಿಸುತ್ತಿದ್ದನು. ಹಚ್ಚಹಸಿರಾದ ಗರಿಕೆಹುಲ್ಲನ್ನು ತಂದು ನೈವೇದ್ಯವನ್ನಾಗಿ ತಿನ್ನಿಸುತ್ತಿದ್ದನು. ಅದು ಕುಳಿತರೆ ತಾನು ಕುಳಿತುಕೊಳ್ಳುತ್ತಾ, ಅದು ನಿಂತರೆ ತಾನೂ ನಿಲ್ಲುತ್ತಾ, ಅದು ನಡೆದಾಡಿದರೆ ತಾನು ನಡೆದಾಡುತ್ತಾ, ಅದು ಮಲಗಿದರೆ ತಾನೂ ಮಲಗುತ್ತಾ, ಅದರ ಸನ್ನಿಧಾನದಲ್ಲಿಯೇ ಇದ್ದುಬಿಟ್ಟನು. ಅದರ ಸೇವೆಗೇ, ಪೂಜೆಗೇ ತನ್ನನ್ನು ಸಂಪೂರ್ಣವಾಗಿ ಸಮರ್ಪಿಸಿಕೊಂಡುಬಿಟ್ಟನು.

ಹೀಗೆಯೇ ದಿನಗಳು ವಾರಗಳಾದವು, ವಾರಗಳು ತಿಂಗಳುಗಳಾದವು, ತಿಂಗಳುಗಳು ವರ್ಷಗಳಾದವು. ಕಾಲಚಕ್ರ ಚೆನ್ನಾಗಿ ಉರುಳಿತು. ಗೋಪಾಲಕನ ಆತ್ಮವೆಲ್ಲವೂ ಆ ಬಸವನಲ್ಲಿಯೇ ನೆಲೆಸಿಬಿಟ್ಟಿತು.

ಒಂದು ದಿನ ಗೋಪಾಲಕನು ಅರಣ್ಯದಲ್ಲಿ ದನಕರುಗಳನ್ನು ಮೇಯಲು ಬಿಟ್ಟು, ತಾನು ಬಸವನ ಧ್ಯಾನದಲ್ಲಿಯೇ ಕುಳಿತಿದ್ದನು. ಸಮೀಪದಲ್ಲಿಯೇ ಬಸವನೂ ಕುಳಿತು ಮೆಲುಕು ಹಾಕುತಿತ್ತು. ಆಗ "ವತ್ಸ, ವತ್ಸ" ಎಂಬ ಧ್ವನಿಯೊಂದು ಬಸವನೊಳಗಿಂದ ಬರುತ್ತಿರುವುದು ಕೇಳಿಸಿತು. ವತ್ಸ ಎಂದರೆ ಮಗನೆಂದು ಭಾವಿಸಿ ಸಂಬೋಧಿಸುವ ಅಕ್ಕರೆಯ ನುಡಿ. ಗೋಪಾಲಕನು ಚಕಿತನಾಗಿ, "ಓಹೋ, ಬಸವನೇ ಮಾತನಾಡುತ್ತಿರುವುದು" ಎಂದುಕೊಂಡು ಲಗುಬಗೆಯಿಂದ ಅತ್ತ ಹೋದನು. ಆದರೆ ಮರುಕ್ಷಣದಲ್ಲಿಯೇ "ಇಲ್ಲ ಇಲ್ಲ, ಬಸವಣ್ಣನು ಮಾತನಾಡಲಾರನು" ಎಂದುಕೊಂಡು ಖಿನ್ನನಾಗಿ, ಹಿಂದಕ್ಕೆ ಬಂದು ಮತ್ತೆ ಬಸವಧ್ಯಾನದಲ್ಲಿ ಮೈಮರೆತು ಕುಳಿತುಬಿಟ್ಟನು. ಸ್ವಲ್ಪ ಹೊತ್ತಿನಲ್ಲಿಯೇ ಮತ್ತೆ ಬಸವನೊಳಗಿಂದ ಅದೇ "ವತ್ಸ, ವತ್ಸ" ಎಂಬ ಅಕ್ಕರೆಯ ಧ್ವನಿ ಹೊಮ್ಮಿ ಬಂದಿತು. ಆಗ ಗೋಪಾಲಕನು ವಿಸ್ಮಿತನಾಗಿ, "ಈಗಂತೂ ಬಸವನೇ ಮಾತನಾಡುತ್ತಿರುವುದು" ಎಂದುಕೊಂಡು ಸರಸರನೆ ಅತ್ತಹೋದನು. ಆದರೆ ಪುನಃ "ಇಲ್ಲ ಇಲ್ಲ, ಬಸವಣ್ಣನು ಮಾತನಾಡಲಾರನು" ಎಂದುಕೊಂಡು ವಿಷಾದದಿಂದ ಹಿಂದಕ್ಕೆ ಬಂದು ಧ್ಯಾನದಲ್ಲಿ ಮುಳುಗಿಬಿಟ್ಟನು.

ಆದರೇನು, ಸ್ವಲ್ಪ ಹೊತ್ತಿನಲ್ಲಿಯೇ ಮೂರನೆಯ ಬಾರಿಗೆಂಬಂತೆ ಬಸವನೊಳಗಿಂದ "ವತ್ಸ, ವತ್ಸ" ಎಂಬ ಧ್ವನಿ ಕೇಳಿಬಂದಿತ್ತಲ್ಲದೆ, "ನಾನು ಯಾವಾಗಲೂ ನಿನ್ನೊಡನೆಯೇ ಇದ್ದೇನೆ" ಎಂಬ ವಾಕ್ಯವೂ ಕೇಳಿಸಿತು. ಆಗ ಗೋಪಾಲಕನಿಗೆ ಬಸವನತ್ತಣಿಂದ ಬರುತ್ತಿರುವಂತೆ ಭಾಸವಾದ ಧ್ವನಿ ತನ್ನ ಹೃದಯಾಂತರಾಳದಿಂದಲೇ ಬರುತ್ತಿದೆ ಎಂಬುದು ಗೋಚರವಾಯಿತು. ಭಗವಂತನು ತನಗಿಂತ ಬೇರೆಯಾಗಿಲ್ಲ, ಆ ಬಸವನಿಗಿಂತ ಕೂಡ ಬೇರೆಯಾಗಿಲ್ಲ ಎಂಬ ಅದ್ಭುತ ಸತ್ಯವೂ ಅವನಿಗೆ ಮನವರಿಕೆಯಾಯಿತು. ಆ ಮುಗ್ಧ ಗೋವಳನಿಗೆ ಸಾಕ್ಷಾತ್ಕಾರದ ಇಡೀ ರಹಸ್ಯವೇ ಕರತಲಾಮಲಕವಾಗಿಬಿಟ್ಟಿತು. ಅವನ ಮನಸ್ಸು ಅನಿರ್ವಚನೀಯವಾದ ಶಾಂತಿ, ಸಮಾಧಾನಗಳಿಂದ ತುಂಬಿತುಳುಕಿತು.

ಒಡನೆಯೇ ಗೋಪಾಲಕನು ಈ ಪರಿಯ ಸೊಬಗಿನಲ್ಲಿ ತನ್ನ ಆತ್ಮೋದ್ಧಾರಕ್ಕೆ ಕಾರಣರಾದ ಯೋಗೀಶ್ವರರ ದರ್ಶನ ಮಾಡಬೇಕೆಂದು ಅತ್ಯಂತ ಲವಲವಿಕೆಯಿಂದ ಅವರ ಆಶ್ರಮದತ್ತ ಹೆಜ್ಜೆ ಹಾಕಿದನು. ದೂರದಿಂದಲೇ ಯೋಗೀಶ್ವರರು ಗೋಪಾಲಕನು ತನ್ನತ್ತ ಬರುತ್ತಿರುವುದನ್ನು ನೋಡಿದರು. ಅಷ್ಟು ಮಾತ್ರವಲ್ಲ, ಅಚ್ಚರಿಯ ಕಣ್ಣುಗಳಿಂದ ಎವೆಯಿಕ್ಕದೆ ನೋಡಿದರು. ಗೋಪಾಲಕನು ಅವರ ಕಣ್ಣಿಗೆ ಈ ಹಿಂದಿನಂತೆ ಕಾಣದೆ, ಪೂರ್ಣಪುರುಷನಾಗಿ ಕಂಡನು. ಅವನ ಶರೀರವೆಲ್ಲವೂ ಕಾಂತಿಮಯವಾಗಿಬಿಟ್ಟಿತ್ತು. ಅವನ ಮುಖಮಂಡಲವು ಮಂದಹಾಸಭರಿತವಾಗಿ ಸ್ವರ್ಗೀಯ ಜ್ಯೋತಿಯನ್ನು ಪಸರಿಸುತಿತ್ತು. ಯೋಗಿಯು ದೊಡ್ಡ ವಿದ್ವಾಂಸರು, ಮಹಾತಪಸ್ವಿ; ಗೋಪಾಲಕನಾದರೋ ದಡ್ಡ, ನಿರಕ್ಷರಕುಕ್ಷಿ- ಎಲ್ಲಿಂದೆಲ್ಲಿಗೆ ಸಂಬಂಧ? ಆದರೇನು, ಆ ಗೋಪಾಲಕನ ಅಪೂರ್ವವಾದ ತೇಜಸ್ಸು ವರ್ಚಸ್ಸು ಕುಳಿತಿದ್ದ ಯೋಗೀಶ್ವರರನ್ನು ಎದ್ದು ನಿಲ್ಲುವಂತೆ ಮಾಡಿತು. "ಬಾರಪ್ಪ, ಬಾ" ಎಂದು ಅಕ್ಕರೆಯಿಂದ ಸ್ವಾಗತಿಸುತ್ತಾ, "ಇದೇನಿದು, ನಿನ್ನಲ್ಲಿ, ಅದೆಂತಹ ಅಭೂತಪೂರ್ವವಾದ ಬದಲಾವಣೆ, ಅದು ಹೇಗೆ ಉಂಟಾಯಿತಪ್ಪಾ" ಎಂದು ಕೇಳಿದರು. ವಿನಯಮೂರ್ತಿಯಾದ ಆ ಗೋಪಾಲಕನು "ಸ್ವಾಮಿ, ಇದೆಲ್ಲ ನಿಮ್ಮ ಅನುಗ್ರಹವಲ್ಲದೆ ಬೇರೆಯಲ್ಲ" ಎಂದನು. ಆಗ ಯೋಗಿಮಹಾತ್ಮರು, "ನಾನು ಮಾಡಿದ ಅನುಗ್ರಹ ವಿನೋದಕ್ಕೆಂದು ಹೇಳಿದ ಮಾತಲ್ಲವೆ?" ಎಂದು ಮತ್ತೆ ಪ್ರಶ್ನಿಸಿದರು. ಆಗ ಗೋಪಾಲಕನು ಸ್ವಲ್ಪವೂ ವಿಚಲಿತನಾಗದೆ, "ತಾವು ವಿನೋದಕ್ಕೆಂದು ಹೇಳಿದರೂ ಅದನ್ನು ನಾನು ಸತ್ಯಶುದ್ಧವೆಂದು ಗಂಭೀರವಾಗಿ ಸ್ವೀಕರಿಸಿದೆ. ತಾವು ಅಪ್ಪಣೆ ಕೊಡಿಸಿದ್ದಂತೆ ನಾನು ನನ್ನ ಬಸವನಿಂದಲೇ ನನಗೆ ಬೇಕಾದ್ದನ್ನೆಲ್ಲ ಪಡೆದುಕೊಂಡೆ, ನನ್ನ ಬಯಕೆ ಫಲಿಸಿತು. ಎಲ್ಲೆಲ್ಲಿಯೂ, ಎಲ್ಲದರಲ್ಲಿಯೂ ದೇವರು ಇದ್ದಾನೆಂಬ ಸತ್ಯವನ್ನು ನನ್ನೊಳಗೇ ಕಂಡುಕೊಂಡೆ" ಎಂದನು.

ಯೋಗೀಶ್ವರರ ಕಂಗಳಿಂದ ಪ್ರೇಮಾಶ್ರುಗಳು ಸುರಿದುವು. ನೀನೇ ಧನ್ಯ ಕಾಣಪ್ಪಾ ಎಂದು ಬಾಚಿ ತಬ್ಬಿಕೊಂಡರು. "ನಾನು ನೂರಾರು ಗ್ರಂಥರಾಶಿಯನ್ನು ಓದಿ ಮರುಳಾದೆ; ಧ್ಯಾನ ಮಾಡಿ ಮಾಡಿ ಗುಡ್ಡೆಹಾಕಿದೆ. ಆದರೇನು, ನೀನು ಯಾವ ಶಾಸ್ತ್ರವನ್ನೂ ಓದದ, ದೇವರೇ ಬೇಕೆಂದು ಪರಿತಪಿಸಿ, ಅವನನ್ನು ಗೆದ್ದುಕೊಂಡುಬಿಟ್ಟೆ. ನಿನ್ನ ಜೀವನವೀಗ ಉಜ್ಜೀವನವಾಯಿತು" ಎಂದು ಕೊಂಡಾಡಿ ಹರಸಿ ಬೀಳ್ಕೊಟ್ಟರು. ◆

# ಮೃತ್ಯುಂಜಯೆ

– ಸೇವಂತಿ ಡಿ. ರೈ

## (ನಾಟಕ)

**ಸತ್ಯನಿಷ್ಠೆಯ ಮೂರ್ತರೂಪವೆನ್ನುವಂತೆ ನಡೆದುಕೊಂಡು ಪತಿಭಕ್ತಿ, ಸತೀಪ್ರೇಮಗಳ ಪರಾಕಾಷ್ಠೆಯನ್ನೇ ಪ್ರದರ್ಶಿಸಿದ ಮಹಾಸಾಧ್ವಿ ಸಾವಿತ್ರಿಯ ಕಥೆಯನ್ನಾಧರಿಸಿದ ಈ ಕಿರುನಾಟಕ. ಇದನ್ನು ರಚಿಸಿದ ಶ್ರೀಮತಿ ಸೇವಂತಿ ಡಿ. ರೈ ಅವರು ಮೈಸೂರು ಶ್ರೀರಾಮಕೃಷ್ಣ ಆಶ್ರಮದ ಭಕ್ತರು.**

### ದೃಶ್ಯ ೧

(ಕಾಡಿನಲ್ಲಿ ದ್ಯುಮಸೇನನ ಆಶ್ರಮ. ಮುಂಜಾನೆ, ನಸುಬೆಳಕು. ರಂಗದ ಮೇಲೆ ಧೂಪದ ಹೊಗೆ ಹರಡುವುದು. ಸತ್ಯವಾನ್ ಧ್ಯಾನಾಸಕ್ತನಾಗಿ ಕುಳಿತಿರುವನು. ಪಕ್ಷಿಗಳ ಇಂಚರ ಕೇಳಿಸುವುದು. ಸತ್ಯವಾನ್ ಮಂತ್ರ ಹೇಳುತ್ತಿರುವುದು ನಿಧಾನವಾಗಿ ಕೇಳಿಸುವುದು.

**ಪ್ರಾತಃಸ್ಮರಾಮಿ ಹೃದಿ ಸಂಸ್ಫುರದಾತ್ಮತತ್ತ್ವಂ**
**ಸಚ್ಚಿತ್‌ಸುಖಂ ಪರಮಹಂಸಗತಿಂ**
**ತುರೀಯಮ್ ।**
**ಯತ್ ಸ್ವಪ್ನಜಾಗರ ಸುಷುಪ್ತಮವೈತಿ ನಿತ್ಯಂ**
**ತದ್ಬ್ರಹ್ಮ ನಿಷ್ಕಲಮಹಂ ನ ಚ ಭೂತಸಂಘಃ ॥**

ಸತ್ಯವಾನನ ಮಂತ್ರ ಮುಗಿಯುತ್ತಲೇ ಒಳಗಿನಿಂದ ಸ್ತ್ರೀಧ್ವನಿಯಲ್ಲಿ ದೇವಿಯ ಸ್ತೋತ್ರ ಕೇಳಿಸುವುದು:

**ಯಾ ದೇವೀ ಸರ್ವಭೂತೇಷು**
**ಜ್ಯೋತಿರೂಪೇಣ ಸಂಸ್ಥಿತಾ ।**
**ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ**
**ನಮೋ ನಮಃ ॥**
**ಯಾ ದೇವೀ ಸರ್ವಭೂತೇಷು**
**ಜ್ಞಾನರೂಪೇಣ ಸಂಸ್ಥಿತಾ ।**
**ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ**
**ನಮೋ ನಮಃ ॥**

ಸತ್ಯವಾನ್ ಆ ಕಡೆ ಸ್ವಲ್ಪ ಹೊತ್ತು ನೋಡುತ್ತ ಕುಳಿತಿದ್ದು, ಅನಂತರ ಮೇಲೆದ್ದು ಒಂದೆಡೆ ಇಟ್ಟಿದ್ದ ಅಂಗವಸ್ತ್ರವನ್ನು ಹೆಗಲಿಗೆ ಹಾಕಿಕೊಂಡು, ಕೊಡಲಿಯನ್ನು ಹೆಗಲಿಗೇರಿಸುತ್ತಿರುವಾಗ ಸಾವಿತ್ರಿಯ ಪ್ರವೇಶ. ರಂಗದ ಮೇಲೆ ಹೆಚ್ಚಿನ ಬೆಳಕು.)

(ಸಾವಿತ್ರಿ ಬಿಳಿಯ ಬಟ್ಟೆ ಧರಿಸಿದ್ದಾಳೆ; ಕಾವಿ ಬಟ್ಟೆಯ ನಡುಪಟ್ಟಿ)

**ಸಾವಿತ್ರಿ :** ಆರ್ಯ, ಇಂದೇನು ಬಹಳ ಬೇಗನೆ ಪರಶು ನಿನ್ನ ಹೆಗಲನ್ನೇರಿದೆ?

**ಸತ್ಯವಾನ್ :** ಹೊತ್ತೇರುವ ಮುನ್ನವೇ ಸೌದೆ ತರೋಣ ಎಂದು ಹೊರಟಿದ್ದೇನೆ. ಆದರೆ ನೀನೇಕೆ ಹೀಗೆ? ಮೂರು ದಿನಗಳಿಂದಲೂ ನೋಡುತ್ತಿದ್ದೇನೆ, ಅದ್ಯಾವುದೋ ವ್ರತ ಹಿಡಿದು ಕುಳಿತ್ತಿದ್ದೀಯೆ. ಉಪವಾಸದಿಂದ ದೇಹವನ್ನು ದಂಡಿಸುತ್ತಿರುವೆ. ಅದ್ಯಾವ ದೇವತೆ ನಿನ್ನ



ಯಾವ ಅಭಿಲಾಷೆಯನ್ನು ನೆರವೇರಿಸಲಿಕ್ಕೋ! ನಿನ್ನ ಈ ವ್ರತಾಚರಣೆಯಿಂದ ನಿನ್ನನ್ನು ಮಾತನಾಡಿಸುವುದೇ ಕಷ್ಟವಾಗಿದೆ.

**ಸಾವಿತ್ರಿ :** ಹಾಗಿದ್ದರೆ ನನ್ನನ್ನು ಕ್ಷಮಿಸು. ಆದರೆ ವ್ರತವನ್ನು ನಿಂದಿಸದಿರು.

**ಸತ್ಯವಾನ್ :** ಶಾಂತಂ ಪಾಪಂ. ವ್ರತವನ್ನು ನಿಂದಿಸುವೆನೆ ನಾನು! ಹಾಗಲ್ಲ ನನ್ನ ಮನದನ್ನೆ; ನನ್ನಿಂದ ದೂರ ದೂರ, ಬಲುದೂರ ಹೋಗುವಂತೆ ಈ ವ್ರತ ಮಾಡುತ್ತದಲ್ಲಾ, ಅದಕ್ಕೆ ಈ ವ್ಯಥೆ.

**ಸಾವಿತ್ರಿ :** ನಿನ್ನ ಈ ಮನದನ್ನೆ ನಿನ್ನಿಂದ ದೂರ ಹೋಗದಿರಲಿ, ಎಂದೆಂದೂ ಈ ಎರಡು ಜೀವಗಳು ಜೊತೆಯಲ್ಲೇ ಎಣೆವಕ್ಕಿಗಳಂತಿರಲಿ ಎಂಬುದಕ್ಕೇ ಈ ವ್ರತ. ಇಂದಿಗೆ ನನ್ನೀ ಜೀವ ಆ ಜೀವವನ್ನು (ಸತ್ಯವಾನನ ಎದೆ ಮುಟ್ಟಿ) ಕೂಡಿ ಒಂದು ಸಂವತ್ಸರವಾಯಿತು. ಸಾವಿತ್ರಿ ಎಂಬ ಈ ಪ್ರಕೃತಿ ಸತ್ಯವಾನ್ ಎಂಬ ಪುರುಷನಲ್ಲಿ ಐಕ್ಯಗೊಂಡ ಸುದಿನವಲ್ಲವೇ ಇಂದು?

**ಸತ್ಯವಾನ್ :** ಹಾಗೋ, ನಿನ್ನ ಅಭೀಷ್ಟ ನೆರವೇರಲಿ ಎಂದು ನಾನೂ ಹಾರೈಸುತ್ತೇನೆ.

**ಸಾವಿತ್ರಿ :** (ಸಂತಸದಿಂದ) ಹಾಗಾದರೆ, ಈ ದಿನದ ನನ್ನ ಅಭೀಷ್ಟ ನೆರವೇರಿಸುವೆಯಲ್ಲಾ?

**ಸತ್ಯವಾನ್ :** ಮನುಷ್ಯ ಮಾತ್ರರಿಂದಾಗುವ ಯಾವ ಕೆಲಸಕ್ಕೂ ಹಿಂಜರಿಯಲಾರೆ.

**ಸಾವಿತ್ರಿ :** ಈ ದಿನ ನಾನೂ ನಿನ್ನ ಜೊತೆ ಕಾಡಿಗೆ ಬರುವೆ.

**ಸತ್ಯವಾನ್ :** ಹಾಂ, ಕೋಮಲಾಂಗಿ, ನಿನಗೆ ಕಾಡಿನ ಮುಳ್ಳುಹಾದಿ ಸಹ್ಯವೇ? ಮಧ್ಯಾಹ್ನದ ಉರಿಬಿಸಿಲಲ್ಲಿ ನೀನು ಬಾಡಿ ಹೋಗಲಾರೆಯೇನು? ಎಂದೂ ಇಲ್ಲದ ಆಸೆ ಇಂದೇಕೆ ಬಂತು ನಿನಗೆ?

**ಸಾವಿತ್ರಿ :** ನಾನು ಸಾವಿತ್ರಿ. ಸತ್ಯವನ್ನು ಬಯಸಿ, ಅರಸಿ, ವರಿಸಿ, ಅದರೊಡನೆ ಜೀವಿಸಿ ಒಂದು ವರ್ಷ ಕಳೆದಿರುವುದನ್ನು ಆಚರಿಸಬೇಡವೆ? ಇಂದಿಗೆ ಒಂದು ವರ್ಷ ಹಿಂದಿನಿಂದ ನಾನು ಇದೇ ವನದಲ್ಲಿರುವುದು ಸುಳ್ಳೇನು? ಮಾವನವರ ಪೂಜೆಗೆ ಕಾಡುಹೂಗಳನ್ನು ಕೊಯ್ದು ತಂದು ಕೊಡುವುದಿಲ್ಲವೇನು? ಪಯಸ್ವಿನಿಯ ನೀರನ್ನು ನಮ್ಮ ಕುಟೀರಕ್ಕೆ ತರುವುದಿಲ್ಲವೇನು? ನಿನ್ನನ್ನು ಮನಸಾ ವರಿಸಿದಂದೇ ನಾನು ಈ ರೀತಿಯ ಜೀವನವನ್ನು ಸ್ವೀಕರಿಸಿದೆ. ನಾನು ನಿನ್ನ ನೆರಳು ಎಂಬುದನ್ನು ನೀನು ಮರೆತಂತಿದೆ.

**ಸತ್ಯವಾನ್ :** ಆದರೆ ನೋಡು, ನಿನ್ನ ಮುಖದಲ್ಲಿ ಎಷ್ಟೊಂದು ದುಗುಡ ತುಂಬಿದೆ! ಕಣ್ಣಾಲಿಗಳಲ್ಲಿ ಭಯ ಆವರಿಸಿದೆ! ಇದೇಕೆ ಸಾವಿತ್ರಿ, ಇಂದು ನಿನ್ನ ರೀತಿಯೇ ಬದಲಾಗಿದೆ?

**ಸಾವಿತ್ರಿ :** ಇಂದೇಕೋ ನನಗೆ, ನಿನ್ನೊಡನೆ ಸುತ್ತಾಡಿಕೊಂಡು ಬರೋಣ ಅನ್ನಿಸುತ್ತದೆ. ನಿನ್ನ ಜೊತೆ ಕಾನನವನ್ನು ಸುತ್ತಿ, ಹೂ ಹಣ್ಣುಗಳನ್ನಾಯ್ದು, ಹರಿಯುವ ನದಿಯಲ್ಲಿ ಮಿಂದು ಬರೋಣ ಅನ್ನಿಸುತ್ತದೆ.

**ಸತ್ಯವಾನ್ :** ನನ್ನ ಲತಾಂಗಿಯನ್ನು ಕೆಲವು ದಿನಗಳ ಉಪವಾಸ ಕೃಶಾಂಗಿಯನ್ನಾಗಿಸಿದೆ. ಉರಿಬಿಸಿಲಿಗೆ ಬಾಡದೇ ಈ ಲತೆ?

**ಸಾವಿತ್ರಿ :** (ಸತ್ಯವಾನನನ್ನು ತೋರಿಸಿ) ಈ ಮರವನ್ನು ಆಶ್ರಯಿಸಿರುವ ಈ ಲತೆಗೆ ಭಯವೇಕೆ? ನನ್ನ ಈ ಒಂದು ಆಸೆಯನ್ನು ನೆರವೇರಿಸಲಾರೆಯಾ ಪ್ರಿಯಕರ?

**ಸತ್ಯವಾನ್ :** ನೀನು ನನ್ನ ಜೊತೆ ಬರುವುದು ನನಗೆ ಅಪ್ರಿಯವೇನು? ನನ್ನ ಸಡಗರ ನೀನೇನು ಬಲ್ಲೆ? ಆದರೆ ನಿನಗೆ ಬಿಸಿಲ ಬೇಗೆ ಕಷ್ಟವಾಗದೆ?

**ಸಾವಿತ್ರಿ :** ನೀನು ನನ್ನ ಬಳಿ ಇರಲು ಯಾವ ಕಷ್ಟವೂ ನನ್ನ ಬಳಿ ಸುಳಿಯದು.

**ಸತ್ಯವಾನ್ :** (ಅವಳ ಧಾಟಿಯಲ್ಲಿ) ನೀನು ನನ್ನ ಬಳಿ ಇರುವಾಗ ಯಮರಾಯನೂ ನನ್ನ ಬಳಿ ಬಾರನು.

**ಸಾವಿತ್ರಿ :** (ಬೆಚ್ಚಿ) ಹಾಗೆಯೇ ಆಗಲಿ.

**ಸತ್ಯವಾನ್ :** ಅದೇಕೆ ಬೆಚ್ಚಿ ಬೀಳುವೆ ಸಾವಿತ್ರಿ?

**ಸಾವಿತ್ರಿ :** ಏನಿಲ್ಲ. ಹೊರಡೋಣವೇ?

**ಸತ್ಯವಾನ್ :** ಹೊರಡೋಣ. ಅತ್ತೆ ಮಾವಂದಿರ ಅಪ್ಪಣೆ ಪಡೆದೆಯೇನು?

**ಸಾವಿತ್ರಿ :** ಆಗಲೇ ಪಡೆದಿರುವೆ.

**ಸತ್ಯವಾನ್ :** ಭಲೇ ಸಾವಿತ್ರಿ. ನಾನು ಒಪ್ಪಿಕೊಳ್ಳುವೆ ಎಂದು ನೀನು ಮೊದಲೇ ತಿಳಿದಿದ್ದೆಯೇನು?

**ಸಾವಿತ್ರಿ :** ನನ್ನ ಮನದನ್ನನ ಮನದಾಳ ನನಗೆ ಗೊತ್ತಿಲ್ಲವೇ?

**ಸತ್ಯವಾನ್ :** ನೀನು ಇಲ್ಲೇ ಇರು. ನಾನು ಮಾತಾಪಿತರ ಅಪ್ಪಣೆ ಪಡೆದು ಬರುವೆ.

(ಸತ್ಯವಾನ್ ಒಳಗೆ ಹೋಗುವನು)

**ಸಾವಿತ್ರಿ :** (ಸ್ವಗತ) ಹೇ ಜಗಜ್ಜನನಿ, ಈ ದಿನವೂ ಎಂದಿನಂತೆ ಸುಗಮವಾಗಿ ಸಾಗುವಂತೆ ಮಾಡು. ನಾರದ ಮಹರ್ಷಿಗಳು ಭವಿಷ್ಯ ನುಡಿದ ಕರಾಳ ದಿನದ ಸೂರ್ಯ ಆಗಲೇ ಉದಯಿಸಿದ. ಸೂರ್ಯನು ಚಲಿಸದಂತೆ ಮಾಡುವ ಶಕ್ತಿ ನನಗಿರುತ್ತಿದ್ದರೆ . . . ಸಮಯವನ್ನು ಹಿಡಿದಿಡುವ ಯುಕ್ತಿ ತಿಳಿದಿದ್ದರೆ . . ಸಾವು ಹುಟ್ಟನ್ನು ಅನುಸರಿಸಿ ಬರುವುದು. ಹುಟ್ಟಿದವನು ಸಾಯಲೇಬೇಕೆಂಬುದು ವಿಧಿ ನಿಯಮ. ಇದನ್ನು ಮೀರಿ ನಡೆಯುವ ಶಕ್ತಿ ಯಾವುದೂ ಇಲ್ಲವೇ? ನನಗೆ ಸತ್ಯವಾನನ ಮೇಲಿರುವ ಪ್ರೀತಿಗೆ, ನನ್ನ ಒಲವಿಗೆ ಬೆಲೆ ಇಲ್ಲವೇ? ತಾಯೇ, ನನ್ನ ಅಳಲನ್ನು ಯಾರಲ್ಲೂ ಹೇಳಿಕೊಳಲಾರೆ, ಸಹಿಸಲಾರೆ. ಸತ್ಯವಾನನ ಚರಮದಿನ ಇಂದೇ ಎಂದು ತಿಳಿದರೆ, ಅತ್ತೆ ಮಾವಂದಿರು ಎದೆಯೊಡೆದು ಸಾಯುವರು. ಸತ್ಯವಾನನೋ ನನ್ನನ್ನೇ ಹಾಸ್ಯ ಮಾಡುತ್ತಾನೆ. ಎಲೈ ದಿಗ್ದೇವತೆಗಳೇ, ನನಗೆ ಧೈರ್ಯ, ಸ್ಥೈರ್ಯಗಳನ್ನು ನೀಡಿ, ಸದಾ ಪತಿಯ ಸಾನ್ನಿಧ್ಯದ ಭಾಗ್ಯವನ್ನು ನೀಡಿ.

(ಕಣ್ಣುಮುಚ್ಚಿ, ಕೈ ಮುಗಿದು ನಿಂತಿರುವಳು. ಸತ್ಯವಾನನ ಪ್ರವೇಶ)

**ಸತ್ಯವಾನ್ :** ಸಾವಿತ್ರಿ, ಸಾವಿತ್ರಿ! (ಸಾವಿತ್ರಿ ನಿದ್ದೆಯಿಂದ ಎಚ್ಚರಗೊಂಡಂತೆ ಕಣ್ತೆರೆಯುವಳು.) ಇದೇನು ಸಾವಿತ್ರಿ, ಈ ದಿನ ನಿನಗೇನಾಗಿದೆ? ನಿನ್ನ ನಿತ್ಯದ ಪೂಜೆ ಮುಗಿಸಿ ಈಗ ತಾನೇ ಬಂದಿರುವೆ. ಆಗಲೇ ಧ್ಯಾನಾಸಕ್ತಳಂತೆ ನಿಂತಿರುವೆ. (ಹಾಸ್ಯದಿಂದ) ಒಳ್ಳೆಯ ತಪಸ್ವಿನಿಯನ್ನು ನಾನು ಕೈಹಿಡಿದಂತಾಗಿದೆ. ಬಾ ಹೋಗೋಣ. (ತೆರಳುವರು).

### ದೃಶ್ಯ –೨

(ಕಾಡು. ಸಾವಿತ್ರಿ–ಸತ್ಯವಾನರು ಮೆಲ್ಲನೆ ನಡೆಯುತ್ತಾ ಬರುವರು. ಅವರು ಅಲ್ಲೇ ಒಂದು ಮರದಡಿಯಲ್ಲಿ ಕುಳಿತು ಕೊಳ್ಳುವರು. ಸತ್ಯವಾನನು ಅಲ್ಲೇ ಕುಳಿತು ಮಣ್ಣಿನಿಂದ ಒಂದು ಕುದುರೆಯನ್ನು ಮಾಡುವನು.)

**ಸತ್ಯವಾನ್ :** ನನ್ನ ಜೊತೆ ಕಾಡೆಲ್ಲಾ ಸುತ್ತಾಡಿ ನಲಿದಾಡಲು ಬರುತ್ತೇನೆಂದೆಯಲ್ಲಾ. ಆದರೆ ಇಂದಿನ ಸುತ್ತಾಟದಲ್ಲಿ ನಲಿದಾಟ ಕಾಣಲೇ ಇಲ್ಲ. ಎಂದಿನ ಹಾಸ್ಯ ನಿನ್ನಲಿಲ್ಲವಲ್ಲ! ಅನ್ಯಮನಸ್ಕಳಂತಿರುವ ನಿನ್ನ ಇಂದಿನ ವರ್ತನೆ ನನಗೆ ಸಮಸ್ಯೆಯಾಗಿದೆ. ನಿನ್ನ ದುಗುಡ ಏಕೆಂದು ನನ್ನಲ್ಲೂ ಹೇಳಬಾರದೆ, ಸಾವಿತ್ರಿ?

**ಸಾವಿತ್ರಿ :** ಸತ್ಯೇಂದ್ರ, ನನ್ನನ್ನು ಕ್ಷಮಿಸು. ಹೇಳಿಕೊಳ್ಳಲಾಗದ ಯಾವುದೋ ಭಯ ನನ್ನನ್ನು ಆವರಿಸಿ ಕಳವಳಗೊಳಿಸುತ್ತಿದೆ.

**ಸತ್ಯವಾನ್ :** ಬರೇ ಪುಕ್ಕಲು ಗುಬ್ಬಚ್ಚಿ ನೀನು. ಮದ್ರಾಧಿಪತಿ ವೀರ ಅಶ್ವಪತಿ ರಾಜನ ಮಗಳು ಸಾವಿತ್ರಿ ನೀನೆಂಬುದನ್ನು ಮರೆತೆಯೇನು?

**ಸಾವಿತ್ರಿ :** ಖಂಡಿತ ಮರೆತಿಲ್ಲ. ಅಷ್ಟೇ ಅಲ್ಲ, ಸತ್ಯವನ್ನೇ ನುಡಿವ ಶಾಲ್ವ ದೇಶದ ದ್ಯುಮಸೇನ ಮಹಾರಾಜರ ಸುಪುತ್ರ, ಸತ್ಯವೇ ಉಸಿರಾಗಿರುವ ಸತ್ಯವಾನನ ಅರ್ಧಾಂಗಿಯಲ್ಲವೇ ನಾನು? ಭಯ ನನ್ನ ಬಳಿ ಸುಳಿಯದು. ಸತ್ಯ ಇರುವಲ್ಲಿ ಭಯ ಎಲ್ಲಿಯದು?

**ಸತ್ಯವಾನ್ :** ಹಾಗಾದರೆ ಈ ವಿಮನಸ್ಕತೆ ಏಕೆ? ನನಗಾಗಿ ನೀನು ಪ್ರಯತ್ನಪೂರ್ವಕ ನಿನ್ನ ಮುಖಾರವಿಂದವನ್ನು ಅರಳಿಸುವುದನ್ನು ನಾನು ತಿಳಿಯಲಾರೆನೆ? ದೇಹ ಎರಡಾಗಿದ್ದರೂ, ಜೀವ ಒಂದಾಗಿರುವ ನಾವು, ಒಬ್ಬರ ನೋವನ್ನು ಇನ್ನೊಬ್ಬರು ಅರಿಯದವರೇ, ಸಾವಿತ್ರಿ? ಮನಸ್ಸಿನೊಳಗಿರುವುದನ್ನು ಬಿಚ್ಚು ಮನಸ್ಸಿನಿಂದ ತಿಳಿಸಿದರೆ ಪರಿಹಾರವನ್ನಾದರೂ ಹುಡುಕಬಹುದು. ಹೇಳು, ತವರೂರಿನಾಸೆ ನಿನ್ನನ್ನು ಕಾಡುತ್ತಿದೆಯೇನು?

**ಸಾವಿತ್ರಿ :** (ನಕ್ಕು) ತವರೂರ ಹಂಬಲ ಯಾವ ಹೆಣ್ಣು ಮಗಳಿಗಿಲ್ಲ? ಆದರೆ ನನಗಿಲ್ಲಿ ಯಾವ ಪ್ರೀತಿಗೆ ಕಡಿಮೆ ಎಂದು ತವರೂರನ್ನು ಹಂಬಲಿಸಲಿ! ನನ್ನ ತಂದೆ ತನ್ನ ಬಿಡುವಿನ ವೇಳೆಯಲ್ಲಿ ಬಂದು ನನ್ನನ್ನು ಕಂಡು ಹೋಗುವುದಿಲ್ಲವೇ? ದೃಷ್ಟಿ ಕಳೆದುಕೊಂಡ ಪೂಜ್ಯ ಅತ್ತೆ ಮಾವಂದಿರನ್ನು ಬಿಟ್ಟು, ಅರ್ಧಜೀವವನ್ನು ನಿನ್ನಲ್ಲಿಟ್ಟು ನಾನು ತವರೂರಿಗೆ ಹೋಗಲೆ?

**ಸತ್ಯವಾನ್ :** ನಿನ್ನನ್ನು ಸತಿಯಾಗಿ ಪಡೆದ ನಾನೇ ಪುಣ್ಯವಂತ.

**ಸಾವಿತ್ರಿ :** ಆರ್ಯ, ನನಗೊಂದು ಸಂಶಯ, ಪ್ರಕೃತಿನಿಯಮವನ್ನು ಮೀರಿದ ನಿಯಮವೊಂದಿರಬಹುದೇ?

**ಸತ್ಯವಾನ್ :** ವಿದ್ಯಾವಂತೆಯಾದ ನಿನ್ನ ಈ ಪ್ರಶ್ನೆಯನ್ನು ಕುರಿತು ಚಿಂತಿಸಬೇಕಾದುದೇ. ವಿಧಿ ನಿಯಮವನ್ನು ಮೀರಿದ ಒಂದು ಶಕ್ತಿ ಇರಲೇಬೇಕಲ್ಲವೇ?

**ಸಾವಿತ್ರಿ :** ಅದು ತಪಃಶಕ್ತಿಯಾಗಿದ್ದಿರಬಹುದೇ?

**ಸತ್ಯವಾನ್ :** ಇರಬಹುದು ಅಥವಾ ಒಲವಿನ ಶಕ್ತಿಯಾಗಿರಲೂಬಹುದು. ಪ್ರೀತಿಯ ಶಕ್ತಿಯ ಮುಂದೆ ಜಗದ ಯಾವ ಶಕ್ತಿಯೂ ನಿಲ್ಲದು. ಪ್ರೀತಿಯಿಂದ, ಒಲುಮೆಯಿಂದ ವಿಶ್ವವಿಜಯಿಯಾಗಬಹುದು.

**ಸಾವಿತ್ರಿ :** ಭಲೇ, ಎಷ್ಟೊಂದು ಸುಂದರವಾಗಿದೆ ನಿನ್ನ ವಾದ. ಆ ಶಕ್ತಿಯು ನಮ್ಮ ಒಲವಿನಲ್ಲೂ ಇರುವುದಲ್ಲವೇ?

**ಸತ್ಯವಾನ್ :** ಖಂಡಿತವಾಗಿ ಇದೆ. (ತಾನು ತಯಾರಿಸಿದ ಅಶ್ವದ ಮೂರ್ತಿ ಪೂರ್ತಿಯಾಗಲು, ಅದನ್ನು ಮೇಲಕ್ಕೆತ್ತಿ ಹಿಡಿದು ಅದರ ಅಂದ ನೋಡುತ್ತಾ) ನಮ್ಮ ಒಲಿವಿನ ಶಕ್ತಿಯಲ್ಲಿ ಸಂಶಯವೇ ನಿನಗೆ?

**ಸಾವಿತ್ರಿ :** ಸಂಶಯವಿಲ್ಲ. ಆದರೂ (ಸತ್ಯವಾನನಿಂದ ಅಶ್ವದ ಗೊಂಬೆಯನ್ನು ತೆಗೆದುಕೊಂಡು, ಮುಂದೆ ಬಂದು) ನಮ್ಮ ಒಲವಿನ ಶಕ್ತಿಯಿಂದ ಈ ಅಶ್ವದ ಗೊಂಬೆಗೆ ಜೀವವನ್ನು ಕೊಡಬಲ್ಲೆವೇ ನಾವು?

**ಸತ್ಯವಾನ್ :** ಸಾವಿತ್ರಿ, ಹುಲು ಮಾನವರಾದ ನಾವು ವಿಧಿಯ ಮುಂದೆ ನಮ್ಮ ಶಕ್ತಿ ಪ್ರದರ್ಶನ ಮಾಡುವುದು ಮೂರ್ಖತನ. ನೋಡು, ನನಗೆ ಬುದ್ಧಿ ತಿಳಿದಂದಿನಿಂದಲೂ ನಾನು ಎಷ್ಟೊಂದು ಮಣ್ಣಿನ ಕುದುರೆಯ ಗೊಂಬೆಗಳನ್ನು ಮಾಡಲಿಲ್ಲ, ಅವುಗಳ ಚಿತ್ರ ಬಿಡಿಸಲಿಲ್ಲ? ಆದುದರಿಂದಲೇ ನನ್ನನ್ನು ಚಿತ್ರಾಶ್ವನೆಂದೂ ಕರೆಯುತ್ತಾರಲ್ಲ! ಅವಕ್ಕೆಲ್ಲಾ ಜೀವ ಬಂದಿದ್ದರೆ . . . ಛೆ . . . ಅಂತಹ ಯೋಚನೆಯೇ ತುಂಬಾ ಹಾಸ್ಯಾಸ್ಪದವಾಗಿದೆ. . . . . ಸಾವಿತ್ರಿ ಇದೇನು ಒಮ್ಮೆಲೆ ನನಗೆ ತಲೆ ಸುತ್ತಿ ಬರುವಂತಾಗುತ್ತಿದೆ! (ಎದೆಯ ಮೇಲೆ ಕೈಯಿಟ್ಟು) ಎದೆಯಲ್ಲಿ ನೋವು ಕಾಣಿಸುತ್ತಿದೆ. ಕಣ್ಣು ಕತ್ತಲು ಬಂದಂತಾಗುತ್ತಿದೆ.

(ಸಾವಿತ್ರಿ ಸತ್ಯವಾನನ್ನು ಹಿಡಿದುಕೊಳ್ಳುವಳು. ಅವಳ ಮುಖ ಕಂಗೆಟ್ಟಿದೆ.)

**ಸಾವಿತ್ರಿ :** ಆರ್ಯ, ಏನಾಯಿತು? ಬಾ, ಆ ಮರದ ನೆರಳಲ್ಲಿ ಸ್ವಲ್ಪ ಹೊತ್ತು ವಿಶ್ರಮಿಸು. ಬಿಸಿಲ ಬೇಗೆಗೆ ಕಣ್ಣು ಕತ್ತಲು ಬಂದಿರಬಹುದು.

(ಸಾವಿತ್ರಿಯನ್ನು ಆಧರಿಸಿಕೊಂಡು, ಸತ್ಯವಾನ್ ಮರದ ನೆರಳಿಗೆ ಹೋಗಿ ಅವಳ ತೊಡೆಯ ಮೇಲೆ ತಲೆಯನ್ನು ಇಟ್ಟು ಮಲಗುವನು. ಸಾವಿತ್ರಿ ಆತನ ತಲೆಯನ್ನು ನೇವರಿಸುತ್ತಾ) ಸತ್ಯವಾನ್, ಪ್ರಾಣನಾಥ, ಎದೆ ತುಂಬಾ ನೋಯುತ್ತಿದೆಯೇ? . . . ಅದೇಕೆ ಮಾತಾಡಲೊಲ್ಲೆ? ನಿದ್ದೆ ಬರುತ್ತಿದೆಯೇನು?

**ಸತ್ಯವಾನ್ :** ಸಾವಿತ್ರಿ, ಅದೇಕೋ ಮಂಕು ಕವಿದಂತಾಗುತ್ತಿದೆ, ಕಣ್ಣಿಗೆ ಏನೂ ಕಾಣಿಸದು. ಎದೆಯಲ್ಲಿ ನೋವು ಕಾಣಿಸುತ್ತಿದೆ. ನೋಡು, ನನ್ನನ್ನು ನಿದ್ದೆ ಆವರಿಸುತ್ತಿದೆ. ಸಾವಿತ್ರಿ, ನಿನ್ನ ತೊಡೆಯ ಮೇಲೆ ತಲೆಯಿಟ್ಟು ಹಾಯಾಗಿ ನಿದ್ರಿಸುವೆ.

**ಸಾವಿತ್ರಿ :** ಸತ್ಯವಾನ್ . . . ಸತ್ಯವಾನ್ . . ಆಗಲೇ ನಿದ್ದೆ ಆವರಿಸಿತೇ ! ಹಾ ವಿಧಿಯೇ, ನನ್ನನ್ನು ಭಾಗ್ಯ ಹೀನಳನ್ನಾಗಿ ಮಾಡದಿರು. ನನ್ನ ಪತಿಭಕ್ತಿಯು ಸತ್ಯ ವಾಗಿರುವುದಾದರೆ, ನಮ್ಮ ಒಲವು ದೋಷ ರಹಿತವಾಗಿರುವುದಾದರೆ, ನನ್ನ ವ್ರತವು ನಿರ್ವಂಚನೆಯಿಂದ ಕೂಡಿರುವುದಾದರೆ, ನನ್ನ ಪತಿಯನ್ನು ನನಗೆ ಉಳಿಸಿಕೊಡು . . . ನಾರದ ಮಹರ್ಷಿಗಳು ತಿಳಿಸಿದ ಆ ಕರಾಳ ಘಳಿಗೆ ಬಂದೇ ಬಿಟ್ಟಿತು . . . ಇಲ್ಲ . . . ಖಂಡಿತ ಇಲ್ಲ . . . ನಾನು ಸತ್ಯವಾನ್‌ನನ್ನು ಬಿಟ್ಟು ಕೊಡುವುದಿಲ್ಲ.

(ಕಣ್ಣು ಮುಚ್ಚಿ ಧ್ಯಾನಾಸಕ್ತಳಾಗುವಳು . . . ಯಮಧರ್ಮದ ಪ್ರವೇಶ)

**ಯಮಧರ್ಮ :** ಮಗಳೇ, ಸಾವಿತ್ರಿ!

**ಸಾವಿತ್ರಿ :** (ಕಣ್ತೆರೆದು) ಗಂಭೀರ ರೂಪದ ನೀನಾರು ತಂದೆ? ಕಾಡಿನ ಮಧ್ಯೆ ಒಬ್ಬಳೇ ಅಬಲೆ ಇದ್ದಾಳೆಂದು ಸಹಾಯ ಮಾಡಲು ಬಂದೆಯಾ? ಸತ್ಯವಾನನ ಜೊತೆ ನನಗಿರು ವಾಗ ನನಗಾರ ಸಹಾಯವೂ ಬೇಡ.

**ಯಮಧರ್ಮ :** ಮಗಳೇ, ನನ್ನನ್ನು ಯಮ ಧರ್ಮನೆನ್ನುವರು. ಕರ್ತವ್ಯ ನಿಷ್ಠನು ನಾನು.

**ಸಾವಿತ್ರಿ :** ದೇವಾ, ನನ್ನನ್ನು ಕ್ಷಮಿಸು. ನಿನಗೆ ವಂದಿಸುವೆನು. ಧರ್ಮಪಾಲನು ನೀನು. ನಿನ್ನ ರೂಪವನ್ನು ನೋಡಿಯೂ ಬೇಗನೆ ತಿಳಿದುಕೊಳ್ಳದ ನನ್ನ ಮೂರ್ಖತನವನ್ನು ಕ್ಷಮಿಸು. ಯಾರ ಅಳುವಿಗೂ ಜಗ್ಗದ, ಭಕ್ತಿಗೂ ಬಗ್ಗದ, ಮಾನವರ ಆರ್ತನಾದಕ್ಕೂ ಕರಗದ ಆ ಪಾಷಾಣ ಪಾಶವನ್ನು ನಿನ್ನ ಕೈಯಲ್ಲಿ ಕಂಡೂ ನಿನ್ನನ್ನು ತಿಳಿಯದ ನನ್ನನ್ನು ಕ್ಷಮಿಸು.

**ಯಮಧರ್ಮ :** ಸಾವಿತ್ರಿ, ಪುಣ್ಯಾತ್ಮ ಸತ್ಯ ವಾನನ ಅವಧಿ ಇಂದಿಗೆ ಮುಗಿಯಿತು.

**ಸಾವಿತ್ರಿ :** ಈ ಮರ್ತ್ಯಲೋಕದ ಮಾನವರ ಜೀವವನ್ನು ಒಯ್ಯಲು ಯಮದೂತರು ಬರುವರೆಂದು ಕೇಳಿದ್ದೆ. ಆದರೆ ಇಂದು ನೀನೇ ಏಕೆ ಬಂದೆ?

**ಯಮಧರ್ಮ :** ಸತ್ಯವಾನನು ಘನವಂತ. ಅಂತಹ ಜೀವವನ್ನು ಒಯ್ಯಲು ನಾನೇ ಬರ ಬೇಕಾಯಿತು.

**ಸಾವಿತ್ರಿ :** ನಮ್ಮೀರ್ವರ ಒಲವು ನಮ್ಮ ಜೀವಗಳನ್ನು ಬೆಸೆದಿದೆ ತಂದೆ.

**ಯಮಧರ್ಮ :** ಹೌದು ಮಗಳೇ, ನಿನ್ನ ಒಲವಿಗೆ, ನಿನ್ನ ಪತಿಭಕ್ತಿಗೆ ಮೆಚ್ಚಿದೆ ಮಗಳೇ. ಇಂದಿನವರೆಗೆ ಈ ಯಮಧರ್ಮನನ್ನು ಮರ್ತ್ಯಲೋಕದಲ್ಲಿ ಕಂಡ ಸತಿಯರಿಲ್ಲ. ಜ್ಞಾನಿಯಾದ ನೀನು ಇಂದು ನಿನ್ನ ಯೋಗಶಕ್ತಿ ಯಿಂದ, ಸೂಕ್ಷ್ಮ ಶರೀರದಿಂದ ನನ್ನ ಸೂಕ್ಷ್ಮ ಶರೀರವನ್ನು ನೋಡಿದೆ. ಹೋಗು ಮಗಳೇ, ನಿನ್ನ ನಿತ್ಯಕರ್ಮದಲ್ಲಿ ನಿರತಳಾಗಿ ಅತ್ತೆಮಾವಂದಿರ ಸೇವೆ ಮಾಡುತ್ತ



ಕೀರ್ತಿಶಾಲಿಯಾಗು. ಧರ್ಮ ಪಾಲನು ನಾನು. ವಿಧಿನಿಯಮವನ್ನು ಯಾರೂ ಉಲ್ಲಂಘಿಸುವಂತಿಲ್ಲ. ವಿಧಿಗೆ ಬೇಕು ಬೇಡ ಗಳಿಲ್ಲ, ರಾಗದ್ವೇಷಗಳಿಲ್ಲ. ಇಪ್ಪತ್ತನಾಲ್ಕು ವಸಂತಗಳನ್ನು ಮಾತ್ರ ಆಯುಷ್ಯವಾಗಿ ಪಡೆದು ಬಂದ ನಿನ್ನ ಸತ್ಯವಾನನ ಅವಧಿ ಇಂದಿಗೆ ತೀರಿತು. ಅವನ ಜೀವವನ್ನು ನಾನು ಒಯ್ಯಲೇಬೇಕು. ನಾನು ಕರ್ತವ್ಯಚ್ಯುತ ನಾಗಲಾರೆ.

**ಸಾವಿತ್ರಿ :** ತಂದೆ, ಧರ್ಮದೇವತೆ ನೀನು, ನಿನ್ನನ್ನು ತಡೆಯುವ ಶಕ್ತಿ ನನಗಿದೆಯೆ? ಕರುಣಾಳು ನೀನು. ನನಗೆ ಪತಿ ಭಿಕ್ಷೆ ನೀಡ ಲಾರೆಯೇನು?

**ಯಮಧರ್ಮ:** ವಿಧಿನಿಯಮವನ್ನು ಉಲ್ಲಂಘಿ ಸುವ ಶಕ್ತಿ ನನಗಿಲ್ಲ. ಮಗಳೇ, ನಿನ್ನ ವಿವಾಹಕ್ಕೆ ಮೊದಲೇ ಮಹರ್ಷಿ ನಾರದರು ಸತ್ಯವಾನನು ಅಲ್ಪಾಯುಷಿ ಎಂದು ತಿಳಿಸಿದ್ದರೂ, ನಿನ್ನ ಹಟ ನೀನು ಬಿಡಲಿಲ್ಲ. ತಿಳಿದೂ ತಿಳಿದೂ ರಾತ್ರಿ ಕಂಡ ಬಾವಿಗೆ ಹಗಲು ಹಾರಿದವಳು ನೀನು.

**ಸಾವಿತ್ರಿ :** ಧರ್ಮದೇವ, ನಿನಗೆ ಸತಿಧರ್ಮವನ್ನು ತಿಳಿಸಬೇಕೇ ನಾನು? ಸತ್ಯವಾನನನ್ನು ನೋಡಿದ ಕ್ಷಣದಿಂದಲೇ ನಾನಾತನನ್ನು ಮನಸಾ ವರಿಸಿದೆ ತಂದೆ. ಸತಿಯಾದವಳು ಪ್ರೀತಿಸುವುದು ಒಬ್ಬನನ್ನು ಒಮ್ಮೆ ಮಾತ್ರ ಅಲ್ಲವೇ ತಂದೆ? ನಾರದರು ದೇವರ್ಷಿಗಳು. ಅವರು ಭವಿಷ್ಯ ನುಡಿದರೆಂದು, ನನ್ನ ಪರಿಶುದ್ಧ ಪ್ರೀತಿಯನ್ನು ನಾನು ಕಡೆಗಣಿಸಲಿಲ್ಲ. ದೇವರ್ಷಿಗಳು ಭವಿಷ್ಯ ನುಡಿಯದಿರುತ್ತಿದ್ದರೆ, ನನಗಿಂದಿನ ದುರಂತ ಆಕಸ್ಮಿಕವಾಗುತ್ತಿತ್ತು ಅಷ್ಟೆ. ಸತಿಧರ್ಮದಲ್ಲಿ ನಿನಗೆ ಅಭಿಮಾನ ಇರುವುದಾದರೆ ಪತಿಭಿಕ್ಷೆಯನ್ನು ನೀಡೆನಗೆ.

**ಯಮಧರ್ಮ :** ಸತಿ ಸಾವಿತ್ರಿ, ನಿನ್ನ ಬೇಡಿಕೆ ಏನೋ ಸಾಧುವಾದುದೆ. ಆದರೆ ವಿಧಿ ನಿಯಮ ಬೇರುಂಟು. ಭೇದವರಿಯದ ಆ ನಿಯಮ ಪಾಲಿಸಲು ನನಗೆ ಸಹಕರಿಸು ಮಗಳೇ.

**ಸಾವಿತ್ರಿ :** ನಾನು ನಿನ್ನ ಕರ್ತವ್ಯಕ್ಕೆ ಅಡ್ಡಿ ಮಾಡಿಲ್ಲ ತಂದೆ.

**ಯಮಧರ್ಮ :** ಮಗಳೇ, ನಿನ್ನೊಲವಿನ ಪಾಶ, ಯಮಪಾಶಕ್ಕಿಂತ ಮಿಗಿಲು. ಇಂದಿನವರೆಗೆ ಇಷ್ಟು ಹೊತ್ತು ಈ ಜವರಾಯನನ್ನು ತಡೆಹಿಡಿದವರಿಲ್ಲ. ಧನ್ಯೆ ನೀನು ಸಾವಿತ್ರಿ, ಧನ್ಯೆ ನೀನು. ಸತ್ಯವಾನನ ದೇಹವನ್ನು ಕೆಳಗೆ ಬಿಟ್ಟು ನೀನು ದೂರ ಸರಿದಲ್ಲಿ, ನನ್ನ ಕರ್ತವ್ಯವನ್ನು ನಾನು ಮಾಡಬಲ್ಲೆ. ಇಲ್ಲ ದಿದ್ದಲ್ಲಿ, ನಿನ್ನೊಲವಿನ ಪಾಶದ ಮುಂದೆ ಈ ಯಮಪಾಶ ಸೋಲಬೇಕಾಗುವುದು.

**ಸಾವಿತ್ರಿ :** ಧರ್ಮದೇವತೆ ನೀನು. ನಿನ್ನನ್ನು ತಡೆಯುವ ಪಾಪದ ಕೆಲಸ ನಾನು ಮಾಡ ಲಾರೆ. ಸತ್ಯವಾನನ ದೇಹವನ್ನು ಇದೋ ನನ್ನಿಂದ ದೂರ ಸರಿಸಿದೆ. (ಮೆಲ್ಲನೆ ಸತ್ಯ ವಾನನ ತಲೆಯನ್ನು ಕೆಳಗಿಟ್ಟು ಹಿಂದಕ್ಕೆ ಸರಿದು ನಿಲ್ಲುವಳು. ಯಮನು ಪಾಶದಿಂದ ಸತ್ಯವಾನನ ಜೀವವನ್ನು ಬಂಧಿಸುವನು.)

**ಯಮಧರ್ಮ :** ವಂದಿಸುವೆ ನಿನಗೆ ಸಾವಿತ್ರಿ. ಮಾವಂದಿರ ಸೇವೆಯಲ್ಲಿ ಕೀರ್ತಿಶಾಲಿಯಾಗು. (ಯಮನು ಮುಂದಡಿ ಇಡುವನು. ಸಾವಿತ್ರಿಯು ಆತನಿಂದ ಸೆಳೆಯಲ್ಪಟ್ಟಂತೆ ಹಿಂದಿನಿಂದ ಹೋಗುವಳು.)

**ಯಮಧರ್ಮ :** ತಡೆ ಮಗಳೇ, ನಿಲ್ಲು ನನ್ನ ಲೋಕಕ್ಕೆ ಮರ್ತ್ಯರು ತಮ್ಮ ಆಯುಷ್ಯ ಮುಗಿಯದೆ ಬರುವಂತಿಲ್ಲ.

**ಸಾವಿತ್ರಿ :** ಸತ್ಯವಾನನ ಜೊತೆ ನನ್ನ ಜೀವವನ್ನು ಕೊಂಡೆಯ್ಯುತ್ತಿರುವೆ ತಂದೆ; ಧರ್ಮದೇವನೆ, ಪತಿಯ ಸಾವಿನ ಬಳಿಕ ಸತಿಯು ಜೀವ ಚ್ಛವವಲ್ಲವೇ?

**ಯಮಧರ್ಮ :** ಅವಧಿ ಮುಗಿಯುವ ಮುನ್ನ, ನಾನು ಯಾರನ್ನೂ ಮುಟ್ಟಲಾರೆ. ಅದು ಅಧರ್ಮ ನೀನು ನನ್ನನ್ನು ಹಿಂಬಾಲಿಸಬೇಡ ಮಗಳೇ ಹಿಂತಿರುಗು. ನಿನ್ನ ಈ ಸೂಕ್ಷ್ಮ ರೂಪದಲ್ಲಿ ನನ್ನನ್ನು ಹಿಂಬಾಲಿಸುವುದು ಸರಿಯಲ್ಲ. ನೀನು ನಿನ್ನ ಸ್ಥೂಲಕಾಯವನ್ನು ಪ್ರವೇಶಿಸಿ, ನಿತ್ಯಕರ್ಮಗಳನ್ನು ಕೊನೆಗೊಳಿಸ ಲೇಬೇಕು.

**ಸಾವಿತ್ರಿ :** ನಾನು ನಿನ್ನನ್ನು ಹಿಂಬಾಲಿಸುತ್ತಿಲ್ಲ ತಂದೆ, ಪತಿ ಇದ್ದಲ್ಲಿ ಸತಿ. ಆದ್ದರಿಂದ ಸತ್ಯವಾನನನ್ನು ಹಿಂಬಾಲಿಸುತ್ತಿರುವೆ.

**ಯಮಧರ್ಮ :** ಸತ್ಯವಾನನ ದೇಹ ಅಲ್ಲೇ ಇದೆ ನೋಡು.

**ಸಾವಿತ್ರಿ :** ಅದು ಪಂಚಭೂತಗಳಿಂದ ಮಾಡಲ್ಪಟ್ಟ ಬರೇ ದೇಹ. ಆತ್ಮವಿಲ್ಲದ ದೇಹವದು. ನಮ್ಮ ಒಲವಿನ ಜೀವನದಲ್ಲಿ ದೇಹಕ್ಕೆ ಬೆಲೆಯಿಲ್ಲ. ನೀನು ಕೊಂಡೊಯ್ಯುತ್ತಿರುವ ಸತ್ಯವಾನನ ಜೀವಾತ್ಮದಲ್ಲಿ ನನ್ನ ಜೀವಾತ್ಮವೂ ಸೇರಿರುವುದನ್ನು ನೀನರಿಯೆಯಾ ತಂದೆ. ನಿನ್ನ ಪಾಶದಿಂದ ನೀನು ಸತ್ಯವಾನನ ಜೀವವನ್ನು ಬಿಗಿಯುವಾಗ ಅದರೊಂದಿಗೆ ನನ್ನನ್ನೂ ಸೆಳೆದೊಯ್ಯುತ್ತಿರುವೆ. ನಮ್ಮದು ದೇಹವೆರಡು, ಆತ್ಮ ಒಂದೇ ತಂದೆ.

**ಯಮಧರ್ಮ :** ಮೆಚ್ಚಿದೆ ಮಗಳೇ. ನಿನ್ನ ವಾಕ್ಸರಣಿಗೆ ಮೆಚ್ಚಿದೆ. ಸತ್ಯವಾನನ ಮೇಲಿನ ನಿನ್ನ ಪ್ರೀತಿಗೆ ಮೆಚ್ಚಿ ನಿನಗೊಂದು ವರವನ್ನು ಕೊಡುವೆ. ಸತ್ಯವಾನನ ಜೀವವನ್ನು ಬಿಟ್ಟು ಬೇರೆ ಏನನ್ನಾದರೂ ಕೇಳು.

**ಸಾವಿತ್ರಿ :** ನೀನು ವರವನ್ನು ದಯಪಾಲಿಸುವು ದಾದರೆ ಧರ್ಮದೇವ, ಕೇಳು. ದೃಷ್ಟಿಯನ್ನು

ಕಳಕೊಂಡ ನನ್ನ ಮಾವ ದ್ಯುಮಸೇನ ಮಹಾರಾಜರು ಪುನಃ ಅವುಗಳನ್ನು ಗಳಿಸಿಕೊಳ್ಳಲಿ.

**ಯಮಧರ್ಮ:** ತಥಾಸ್ತು. ನಿನ್ನ ಇಚ್ಛೆ ನೆರವೇರಿಸಿದೆ ಸಾವಿತ್ರಿ. ಈಗ ಹಿಂತಿರುಗಿ ಹೋಗು.

(ಯಮ ಮುಂದೆ ಹೋಗುತ್ತಾ ಹಿಂತಿರುಗಿ ನೋಡಲು, ಸಾವಿತ್ರಿ ಆತನನ್ನು ಅನುಸರಿಸುತ್ತಿರುವಳು)

**ಯಮಧರ್ಮ :** ದೇವಿ ಸಾವಿತ್ರಿ, ಇದೇನು ನಿನ್ನ ಹಟ?

**ಸಾವಿತ್ರಿ :** ಹಟವಲ್ಲ ದೇವ. ಪತಿಯನ್ನು ಅನುಸರಿಸುವ ಸತಿಧರ್ಮ. ನಿನ್ನ ಧರ್ಮವ ನೀನು ಮಾಡುತ್ತಿರುವೆ. ನನ್ನ ಧರ್ಮವ ನಾನು ಮಾಡಬಾರದೇ ತಂದೆ?

**ಯಮಧರ್ಮ:** ನರರು ನರಲೋಕದ ನಿಯಮಕ್ಕೆ ಬದ್ಧರು. ನಾನು ಒಯ್ಯುತ್ತಿರುವ ಜೀವವು ಈಗ ನನ್ನದಾಯಿತು ಸಾವಿತ್ರಿ. ಅದರ ಮೇಲೆ ನಿನಗಧಿಕಾರವಿಲ್ಲ. ಸಾವಿತ್ರಿ, ಸತ್ಯವಾನನನ್ನು ನಾನೆಲ್ಲಿಗೊಯ್ಯುತ್ತಿರುವೆ ಗೊತ್ತೇನು?

**ಸಾವಿತ್ರಿ :** ಎಲ್ಲಾದರೇನು ತಂದೆ, ಪತಿಯಿದ್ದೆಡೆ ಸತಿ. ನರಕಕ್ಕೊ, ನಾಕಕ್ಕೊ ಎಲ್ಲಾ ಒಂದೇ. ಒಲಿದೆರಡು ಜೀವಗಳು, ಒಲಿದೆರಡು ಮನಸ್ಸುಗಳು ಎಲ್ಲಿರುವವೋ ಅದೇ ಸ್ವರ್ಗ. ಆದರೆ ದೇವ, ಧರ್ಮದೇವ, ನಾನು ನಾನಾಗಿ ನಿನ್ನನ್ನು ಅನುಸರಿಸುತ್ತಿಲ್ಲ. ನನ್ನ ಜೀವದ ಜೀವವನ್ನು ನೀನು ಪಾಶದೊಳು ಬಿಗಿದೊಯ್ಯುತ್ತಿರುವಾಗ ನನ್ನ ಜೀವ ಹೀಗೆ ಸೂಕ್ಷ್ಮರೂಪದಲ್ಲಿ ಆತನನ್ನು ಅನುಸರಿಸಬಾರದೆ?

**ಯಮಧರ್ಮ :** ನಿನ್ನ ಸತಿಧರ್ಮಕ್ಕೆ ತಲೆಬಾಗುವೆನು. ಹಿಂತಿರುಗಿ ಹೋಗಿ, ಅತ್ತೆ ಮಾವಂದಿರ ಸೇವೆ ಮಾಡು. ಅದು ನಿನ್ನ ಕರ್ತವ್ಯವಲ್ಲವೇ?

**ಸಾವಿತ್ರಿ :** ಅದೂ ಕರ್ತವ್ಯ ನಿಜ. ನೊಂದ ಮಾತಾಪಿತರು ತಮ್ಮ ಮಗನೆಲ್ಲಿ ಎಂದು ನನ್ನನ್ನು ಕೇಳಿದರೆ, ನಾನು ಏನೆನ್ನಲಿ? ಯಮಧರ್ಮನಿಗೆ ಒಪ್ಪಿಸಿದೆ ಎನ್ನಲೆ? ಅವರ ಅಳಲನ್ನು ನಾನು ನೋಡಲಾರೆ. ಸಾಂತ್ವನಗೊಳಿಸಲು, ಅವರ ಮಗನನ್ನು ಹಿಂತಿರುಗಿಸು. ನನ್ನ ಪತಿಯನ್ನು ನಾನು ಅನುಸರಿಸುವುದು ನನ್ನ ಪರಮಧರ್ಮ ಎಂದು ನಾನು ತಿಳಿದಿದ್ದೇನೆ, ತಂದೆ.

**ಯಮಧರ್ಮ :** ನಿನ್ನ ಸತಿಧರ್ಮಕ್ಕೆ ಮೆಚ್ಚಿದೆ ಮಗಳೇ– ನೀನು ಇನ್ನೊಂದು ವರವನ್ನು ಕೇಳು. ಸಂತಸದಿಂದ ಕರುಣಿಸುವೆನು. ಆದರೆ ಸತ್ಯವಾನ್‌ನ ಜೀವವನ್ನು ಕೇಳದಿರು.

**ಸಾವಿತ್ರಿ :** ನಾನು ಧನ್ಯೆ ತಂದೆ. ನೀನು ವರವನ್ನು ನೀಡುವುದಾದರೆ ನನ್ನ ಮಾವ ದ್ಯುಮಸೇನ ಮಹಾರಾಜರು ತಾವು ಕಳೆದುಕೊಂಡ ರಾಜ್ಯವನ್ನು ಪುನಃ ಪಡೆಯಲಿ.

**ಯಮಧರ್ಮ :** ತಥಾಸ್ತು. ಆ ಸಂತಸದ ಸುದ್ದಿಯನ್ನು ಶೀಘ್ರವೇ ಹೋಗಿ ತಿಳಿಸು. ಬಹಳ ದೂರ ಬಂದು ದಣಿದಿರುವೆ ನೀನು (ಯಮನು ಮುಂದಕ್ಕೆ ಅಡಿ ಇಡುವನು) (ಹಿಂಬಾಲಿಸುತ್ತಿರುವ ಸಾವಿತ್ರಿಯನ್ನು ನೋಡಿ, ಗಡುಸಾಗಿ) ಸಾವಿತ್ರಿ, ನನ್ನೊಡನೆ ಹಟಸಾಧನೆ ನಿನಗೆ ಒಳಿತಲ್ಲ. ಹಿಂತಿರುಗು, ಮರುಳೇನು ನಿನಗೆ? ಮರಳು ಬೇಗ.

**ಸಾವಿತ್ರಿ :** ದೇವಾ ಕ್ಷಮಿಸು. ನಾನು ನನ್ನ ಇಚ್ಛೆಯಿಂದ ಬರುತ್ತಿಲ್ಲ. ಯಾವುದೋ ಶಕ್ತಿ ನನ್ನನ್ನು ಒಯ್ಯುತ್ತಿದೆ. ನನ್ನ ಸ್ಥಿತಿಯನ್ನು ಅರ್ಥ ಮಾಡಿಕೋ ತಂದೆ. ಬಯಸಿ ಸತ್ಯವನ್ನು ವರಿಸಿ, ಸತ್ಯದೊಡನೆ ಜೀವಿಸಿದ ನಾನು ಸತ್ಯವನ್ನುಳಿದು ಜೀವಿಸಲಾರೆ. ನಮ್ಮದು ಪ್ರಕೃತಿ ಪುರುಷ ಸಮ್ಮಿಳನದಂತೆ ಐಕ್ಯಗೊಂಡಿರುವುದು. ಆ ಶಕ್ತಿಯೇ ನನ್ನನ್ನು ಇಲ್ಲಿಯವರೆಗೆ ಬರಮಾಡಿಸಿದೆ.

**ಯಮಧರ್ಮ :** ಧೀರೆ ಸಾವಿತ್ರಿ, ನೀನು ಬಹಳ ಜಾಣೆ. ನಿನ್ನಂತಹ ಸುಜ್ಞಾನಿಯನ್ನು ನಾನು ಈವರೆಗೆ ಕಂಡಿಲ್ಲ. ನಿನ್ನ ಜಾಣ್ಮೆಗೂ, ಪ್ರೇಮಕ್ಕೂ ಮೆಚ್ಚಿ, ಇನ್ನೊಂದು ವರವನ್ನು ಕರುಣಿಸುವೆ. ಸತ್ಯವಾನನ ಆತ್ಮವನ್ನು ಬಿಟ್ಟು ಏನು ಬೇಕಾದರೂ ಕೇಳು.

**ಸಾವಿತ್ರಿ :** ಧರ್ಮದೇವಾ, ನೀನು ಮೆಚ್ಚಿ ವರವನ್ನು ಕರುಣಿಸುವುದಾದರೆ, ದ್ಯುಮಸೇನ ಮಹಾರಾಜ ತನ್ನ ರಾಜ್ಯದ ಸ್ವರ್ಣ ಸಿಂಹಾಸನದಲ್ಲಿ ಕುಳಿತು ನನ್ನ ಮಗನಿಗೆ ಉಣಿಸುವುದನ್ನು, ನಾನು ನನ್ನ ತಮ್ಮಂದಿರೊಡಗೂಡಿ ನೋಡುವ ಭಾಗ್ಯವನ್ನು ದಯಪಾಲಿಸು ಧರ್ಮದೇವಾ.

**ಯಮಧರ್ಮ :** ಮೆಚ್ಚಿದೆ, ಮೆಚ್ಚಿದೆ ನಿನ್ನ ವಿದ್ವತ್ತಿಗೆ, ವಾಕ್ಸರಣಿಗೆ, ತರ್ಕಕ್ಕೆ. ನಿನ್ನ ಬುದ್ಧಿವಂತಿಕೆಯ ಮಾತಿಗೆ, ನಿನ್ನ ಧರ್ಮಜ್ಞಾನಕ್ಕೆ ಮೆಚ್ಚಿದೆ. ತಥಾಸ್ತು ಸಾವಿತ್ರಿ ನಿನ್ನ ಇಷ್ಟಾರ್ಥ ಸಿದ್ಧಿಸಲಿ. ಸ್ತ್ರೀಯು ಉಭಯಕುಲಕ್ಕೂ ಮೋಕ್ಷದಾತೆಯೆಂಬುದು ಸುಳ್ಳಲ್ಲ. ಧನ್ಯೆ ಸಾವಿತ್ರಿ. ನಿನ್ನಂಥಾ ಸತಿಯನ್ನು ನಾನು ಹಿಂದೆ ಕಂಡಿಲ್ಲ. ಮುಂದೆ ಅಂಥವರು ಹುಟ್ಟುವುದು ದುರ್ಲಭ. ನಿನ್ನ ಶ್ರೇಯೋಭಿವೃದ್ಧಿಯಾಗಲಿ, ನಿನ್ನ ವಂಶ ಬೆಳಗಲಿ.

**ಸಾವಿತ್ರಿ :** ಪೂಜನೀಯ ತಂದೆ, ವಂದಿಸುವೆ. ಸಂತಸದಿಂದ ಹಿಂತಿರುಗುವೆ. ಆದರೆ ಸತ್ಯವಾನನನ್ನು ನೀನು ನಿನ್ನ ಪಾಶದಿಂದ ಬಿಡುಗಡೆ ಮಾಡಬೇಕಲ್ಲವೆ?

**ಯಮಧರ್ಮ :** ಅದೇನು ಮಾತು ಸಾವಿತ್ರಿ? ಎಂದಿಗೂ ಅದು ನಡೆಯದ ಮಾತು.

**ಸಾವಿತ್ರಿ :** ಧರ್ಮದೇವ, ನಿನಗೆ ಧರ್ಮ ಬೋಧಿಸಲು ನಾನಾರು? ಆದರೂ ನಿನ್ನ ಮಾತನ್ನು ನಿನಗೆ ನೆನಪಿಸುವೆ. ನನ್ನ ಮೇಲೆ ಕರುಣೆ ಇಟ್ಟು, "ನಿನ್ನ ಶ್ರೇಯೋಭಿವೃದ್ಧಿಯಾಗಲಿ, ನಿನ್ನ ವಂಶೋಭಿವೃದ್ಧಿಯಾಗಲಿ" ಎಂದು ನೀನು ಹರಸಿದೆ. ಸತ್ಯವಾನ್‌ನನ್ನು ಹಿಂತಿರುಗಿಸದಿದ್ದರೆ ನೀನು ವಚನಭ್ರಷ್ಟನಾಗುವೆಯಲ್ಲವೇ ದೇವಾ? ಸತ್ಯವಾನನಿಲ್ಲದೆ ನನ್ನ ವಂಶಾಭಿವೃದ್ಧಿ ಹೇಗಾಗುವುದು ದೇವಾ?

**ಯಮಧರ್ಮ :** ಧರ್ಮವನ್ನು ಧರ್ಮದಿಂದ ಗೆದ್ದೆ. ವಿಧಿನಿಯಮವನ್ನು ಮೀರಿದ ಶಕ್ತಿಯೊಂದಿದೆ ಎಂಬುದನ್ನು ಜಗತ್ತಿಗೆ ತಿಳಿಸಿದೆ. ಆ ಶಕ್ತಿ ನೀನೇ ಸಾವಿತ್ರಿ, ನಿನಗೆ ವಂದಿಸುವೆನು. ನಿನ್ನ ಜಾಣ್ಮೆಯಿಂದ ನಿನ್ನ ಮಾವನಿಗೆ ದೃಷ್ಟಿಯನ್ನು, ರಾಜ್ಯವನ್ನು ಗಳಿಸಿರುವುದಲ್ಲದೆ ಪುತ್ರಹೀನನಾದ ನಿನ್ನ ತಂದೆ ಅಶ್ವಪತಿ ರಾಜನಿಗೆ ಪುತ್ರ ಸಂತಾನವನ್ನು ದೊರಕಿಸಿಕೊಟ್ಟೆ. ನನ್ನನ್ನು ನನ್ನ ಮಾತಿನಲ್ಲೇ ಸಿಕ್ಕಿಸಿ ನಿನ್ನ ಪತಿಯನ್ನು ನಿನ್ನಲ್ಲೇ ಉಳಿಸಿಕೊಂಡೆ. ಜಗದ್ವಂದ್ಯೆ ನೀನು ಮೃತ್ಯುಂಜಯೆ ನೀನು. ಸತ್ಯವೇ ನೀನು. ನಿನ್ನ ಮುಂದೆ ನಾನು ಸೋಲನ್ನು ಒಪ್ಪಿಕೊಂಡೆ. ನಿನ್ನ ಪತಿಯನ್ನು ನಿನಗೆ ಹಿಂತಿರುಗಿಸಿರುವೆ, ಸತ್ಯವಾನ್ ಮತ್ತು ಸಾವಿತ್ರಿಯನ್ನು ಬೇರ್ಪಡಿಸಲು ವಿಧಿಗೆ ಸಾಧ್ಯವಿಲ್ಲ. ಸತಿ ಸಾವಿತ್ರಿ ನೀನು ಮೃತ್ಯುಂಜಯೆ ಎಂಬ ಹೆಸರಿನಿಂದ ಜಗದ್ವಂದ್ಯೆಯಾಗಿ ಬಾಳು. ವಿಧಿ ನಿಯಮವನ್ನು ಗೆದ್ದಿರುವ ನಿನ್ನ ಪ್ರೇಮ ಅಮರ. ಪ್ರೀತಿಯಿಂದ ಜಗತ್ತನ್ನೆ ಗೆಲ್ಲಬಹುದು ಎಂಬುದನ್ನು ನೀನು ತೋರಿಸಿಕೊಟ್ಟೆ. ಹೋಗು, ಸುಖಿಯಾಗಿ ಬಾಳು ಸಾವಿತ್ರಿ.

**ಸಾವಿತ್ರಿ :** (ಕೈಮುಗಿದು ತಲೆಬಾಗಿ) ನಿನಗೆ ಚಿರಋಣಿ ನಾನು. ಧರ್ಮದೇವ, ವಂದಿಸುವೆ. (ಯಮರಾಜನ ನಿರ್ಗಮನ. ಸತ್ಯವಾನ್ ಮಲಗಿದಲ್ಲಿಂದ ನಿದ್ದೆಯಿಂದ ಎದ್ದವನಂತೆ ಎದ್ದು ಕುಳಿತುಕೊಳ್ಳುವನು. ಸಾವಿತ್ರಿ ಅವನನ್ನು ಹಿಡಿದು ನಿಲ್ಲಿಸುವಳು. ಸಾವಿತ್ರಿಯ ಹೆಗಲ ಮೇಲ ಕೈಯಿಟ್ಟು ಸತ್ಯವಾನ್ ಎರಡು ಹೆಜ್ಜೆ ಮುಂದೆ ಬರುವನು. (ಪರದೆ)

(*ಸೂಚನೆ:* ಸಾವಿತ್ರಿ ಯಮನೊಡನೆ ಮಾತಾಡುವಾಗ ಆರಂಭದಲ್ಲಿ ಕುಳಿತಿರಬೇಕು. ಯಮನನ್ನು ಹಿಂಬಾಲಿಸುವ ದೃಶ್ಯವನ್ನು ನೀಲಿ ಪರದೆಯ ಮುಂದೆ ತೋರಿಸಬೇಕು. ಮೋಡಗಳು ಮೇಲೆ ನಡೆದಂತೆ ರಂಗವನ್ನು ಸಜ್ಜುಗೊಳಿಸಬಹುದು. ಯಮನು ಪಾಶದಿಂದ ಸತ್ಯವಾನನನ್ನು ಬಂಧಿಸಿ, ಮುಂದೆ ಅಡಿ ಇಡುವಾಗ ಬೆಳಕು ಆರಿಸಿ, ನೀಲಿ ಪರದೆಯ ಮುಂದೆ ಯಮ ಮತ್ತು ಸಾವಿತ್ರಿಯರನ್ನು ತೋರಿಸಬೇಕು. ಯಮನಿಂದ ಸಾವಿತ್ರಿ ಬೀಳ್ಕೊಂಡಾಗಲೂ ಬೆಳಕು ಆರಿಸಿ, ಮಲಗಿದ್ದ ಸತ್ಯವಾನನ ಬಳಿ ಧ್ಯಾನಾಸಕ್ತಳಂತೆ ಕುಳಿತ ಸಾವಿತ್ರಿಯನ್ನು ತೋರಿಸಿ, ಬಳಿಕ ಧ್ಯಾನದಿಂದ ಎಚ್ಚತ್ತಂತೆ ತೋರಿಸಿ, ಆಕೆ ಸತ್ಯವಾನನಿಗೆ ಏಳಲು ಸಹಕರಿಸಬೇಕು.) ◆

ಪುಸ್ತಕ ಪರಿಚಯ

# ಸಮಗ್ರ ಆರೋಗ್ಯ ದರ್ಶನ

ಲೇಖಕರು : ಡಾ|| ಎಸ್.ಪಿ. ಯೋಗಣ್ಣ
ಪ್ರಕಾಶಕರು : ಆರೋಗ್ಯ ಯೋಗ ಸಂಸ್ಥೆ (ರಿ), ತಾಯಮ್ಮ ಪ್ರಕಾಶನ, ನಂ-೦೫, ಮಹಾಬೋಧಿ ರಸ್ತೆ, ಸರಸ್ವತಿಪುರಂ, ಮೈಸೂರು-೦೯
ಬೆಲೆ : ರೂ. ೬೦೦-೦೦
ಪುಟಗಳು : ೭೨೮

ಕನ್ನಡ ಭಾಷೆಯಲ್ಲಿ ವೈದ್ಯವಿಜ್ಞಾನದ ಬಗ್ಗೆ ಗ್ರಂಥಗಳು ವಿರಳ. ಶ್ರೀಮಾನ್ ಯೋಗಣ್ಣರವರು ಮೈಸೂರು ವೈದ್ಯಕೀಯ ಮಹಾವಿದ್ಯಾಲಯ ಸಂಶೋಧನ ಸಂಸ್ಥೆ ಮತ್ತು ಅದಕ್ಕೆ ಸೇರಿದ ಆಸ್ಪತ್ರೆಗಳಲ್ಲಿ ಬೋಧಕರಾಗಿ, ತಜ್ಞ ವೈದ್ಯರಾಗಿ, ಸಂಶೋಧಕರಾಗಿ, ಕಿರಿಯರ ಹಾಗೂ ವೈದ್ಯ ವಿದ್ಯಾರ್ಥಿಗಳ ಮಾರ್ಗದರ್ಶಕರಾಗಿ ಗಳಿಸಿದ ಹಲವಾರು ದಶಕಗಳ ಅಪಾರ ಅನುಭವದ ಆಧಾರದ ಮೇಲೆ ಈ ಗ್ರಂಥವನ್ನು ರಚಿಸಿದ್ದಾರೆ. ಈ ಗ್ರಂಥ ಗಾತ್ರದಲ್ಲೂ, ವಿಶಾಲತೆಯಲ್ಲೂ, ಗಹನತೆಯಲ್ಲೂ ಹಿರಿಯದಾಗಿದ್ದು, ಇದನ್ನು ಒಂದು ಬೃಹದ್ಗ್ರಂಥ ಎನ್ನಬಹುದು.

ಇದರಲ್ಲಿ ೭೨೮ ಪುಟಗಳಿದ್ದು, ೧೫ ಅಧ್ಯಾಯಗಳಿವೆ. ಅಧ್ಯಾಯಗಳು ಅರ್ಥಪೂರ್ಣ ಮತ್ತು ಸೂಕ್ತ ಅನ್ವಯವುಳ್ಳ ಶೀರ್ಷಿಕೆಗಳನ್ನು ಹೊಂದಿವೆ. ಸೃಷ್ಟಿಯ ಜ್ಞಾನಸಂಪತ್ತಿನಿಂದ ಪ್ರಾರಂಭವಾಗಿ ಆರೋಗ್ಯ ಸಂರಕ್ಷಣೆಯಲ್ಲಿ ವೈದ್ಯನ ಪಾತ್ರದವರೆಗೆ ಆರೋಗ್ಯ-ಅನಾರೋಗ್ಯಗಳ ದೈಹಿಕ, ಮಾನಸಿಕ, ಭಾವನಾತ್ಮಕ, ಸಾಮಾಜಿಕ, ಆಧ್ಯಾತ್ಮಿಕ ಅಂಶಗಳ ವಿಚಾರಪೂರ್ಣ ವಿವರಗಳು ಲಭ್ಯವಿವೆ. ರೋಗ-ರೋಗೀ ಕೇಂದ್ರಿತ ಪದ್ಧತಿಯ ಸಮನ್ವಯವು ಅಗತ್ಯವೆಂಬ ಅಂಶ ಇಲ್ಲಿ ಬಿಂಬಿತವಾಗಿದೆ. ಇಲ್ಲಿನ ಅಧ್ಯಾಯಗಳಲ್ಲಿ 'ಅನಾರೋಗ್ಯ ಸೂಚಕಾಂಶಗಳು', 'ಸಮಗ್ರ ಆರೋಗ್ಯ ಸಂರಕ್ಷಣೆ', 'ಮದ್ದಿನಿಂದ ಮಂದಹಾಸದೆಡೆಗೆ', 'ಆರೋಗ್ಯ ನಿಯಂತ್ರಿಸುವ ಅಂಶಗಳು'-ಹೀಗೆ ಹಲವಾರು ವಿಷಯಗಳ ಬಗ್ಗೆ ಬೆಳಕು ಚೆಲ್ಲಲಾಗಿದೆ.

ಆರೋಗ್ಯ-ಅನಾರೋಗ್ಯ ಇವು ವಿಶ್ವಸೃಷ್ಟಿಯ ಆರಂಭದಿಂದ ಇಂದಿನ ವರೆಗೆ, ಗರ್ಭದಿಂದ ಗೋರಿಯವರೆಗೆ, ಮಾನವನನ್ನು ಮತ್ತು ಸಸ್ಯ ಪ್ರಾಣಿಜೀವಿಗಳನ್ನು ಬೆಂಬಿಡದೆ ಕಾಡುತ್ತಿವೆ. ಇನ್ನೂ ಅರ್ಥಮಾಡಿಕೊಳ್ಳಲಾಗದ ನಿಗೂಢ ಅಂಶಗಳು ಅಸಂಖ್ಯಾತ. ನೆಗಡಿಯಿಂದ ಹಿಡಿದು ಕ್ಯಾನ್ಸರ್‌ವರೆಗೆ ರೋಗಗಳು ವೈವಿಧ್ಯಮಯ. ರೋಗಗಳಿಗೆ ಕಾರಣಗಳು ಹಲವಾರು. ಹಾಗೆಯೇ ರೋಗ ಪರೀಕ್ಷಾವಿಧಾನಗಳು ಮತ್ತು ನಿರ್ಣಯಗಳು, ಚಿಕಿತ್ಸಾಕ್ರಮಗಳು, ನಿವಾರಣೋಪಾಯಗಳು ವೈವಿಧ್ಯಮಯ. ಸ್ಥಳೀಯ, ಭೌಗೋಳಿಕ, ಚಾರಿತ್ರಿಕ, ಸಾಂಸ್ಕೃತಿಕ ಭಾಷೆಯ ಕಾರಣಗಳು ಸ್ವಯಂವೇದ್ಯ. ಎಲ್ಲೆಡೆ ವಿವಿಧ ವೈದ್ಯಕೀಯ ಪದ್ಧತಿಗಳ ಉಗಮವಾಗಿದೆ. ಬಹು ಪ್ರಾಚೀನ ಎನ್ನಬಹುದಾದ ಆಯುರ್ವೇದ, ಟಿಬೆಟನ್, ಚೈನೀ, ಕೊರಿಯನ್, ಯುನಾನಿ, ಸಿದ್ಧ, ದೇಶೀಯ, ಬುಡಕಟ್ಟು ವೈದ್ಯ (Tribal Medicine), ಆಧುನಿಕ ವೈದ್ಯ ವಿಜ್ಞಾನ ಪದ್ಧತಿಯವರೆಗೆ ಹಲವಾರು ವೈದ್ಯ ಪದ್ಧತಿಗಳು ವಿಶ್ವದಾದ್ಯಂತ ಬಳಕೆಯಲ್ಲಿವೆ.

ಒಂದು ಕಾಲದಲ್ಲಿ ವಾಸಿಮಾಡುವ ಕಲೆಯಾಗಿದ್ದು (Art of healing) ನಂತರ ಸಂಶೋಧಕ, ಪ್ರಾಯೋಗಿಕ, ಸಾಕ್ಷ್ಯಾಧಾರಿತ ವೈದ್ಯಕೀಯ ವಿಜ್ಞಾನವಾಗಿ (Research, Experimental, Evidence Based Medical Science) ಮಾರ್ಪಟ್ಟು, ಇತ್ತೀಚೆಗೆ ಔಷಧ-ಉಪಕರಣ-ತಯಾರಕರ ರಾಕ್ಷಸ ಕಪಿಮುಷ್ಟಿಗೆ ಸಿಲುಕಿದ ಹಣಹೂಡಿಕೆ, ಲಾಭಗಳಿಕೆಯ (Commercial Enterprise) ಉದ್ಯೋಗವಾಗಿರುವುದು ಎಲ್ಲರಿಗೂ ಚಿರಪರಿಚಿತ.

ಪೂರ್ವಾಗ್ರಹ ಪೀಡಿತರಾಗದೆ, ಯಾವ ಒಂದು ಪದ್ಧತಿಯನ್ನೂ ವಿಶೇಷವಾಗಿ ತೆಗಳದೆ ಅಥವಾ ಶ್ಲಾಘಿಸದೆ, ಎಲ್ಲವನ್ನೂ ಸಮಗ್ರ-ಸಮತೋಲನಾತ್ಮಕವಾಗಿ ವಿಶ್ಲೇಷಿಸಿ, ವಿಮರ್ಶಿಸಿ ಉಪಯುಕ್ತವಾದ ಅಂಶಗಳನ್ನು ಅಳವಡಿಸಿಕೊಂಡು ರೋಗಿಯ ಹಿತಚಿಂತನೆ ಮಾಡುವುದು ಸೂಕ್ತ. ಉದಾರೀಕರಣ, ಜಾಗತೀಕರಣ, ಖಾಸಗೀಕರಣ, ವಾಣಿಜ್ಯೀಕರಣ ಹಲವಾರು ಹೊಸ ಹೊಸ ಸಮಸ್ಯೆಗಳನ್ನು ಹುಟ್ಟುಹಾಕುತ್ತಿವೆ. ಔಷಧಗಳ ಅತಿಯಾದ ಬಳಕೆ ಹೊಸ ರೋಗಗಳಿಗೆ ಕಾರಣವಾಗಿವೆ.

ಸರ್ಕಾರಿ, ಸರ್ಕಾರೇತರ, ಖಾಸಗಿ ಮತ್ತು ಸೇವಾಸಂಸ್ಥೆಗಳು (ಆರೋಗ್ಯ ವಿತರಣಾ ಪದ್ಧತಿ) ಈ ಕ್ಷೇತ್ರದಲ್ಲಿ ದುಡಿಯುತ್ತಿವೆ.

ಬೋಧಕ, ಚಿಕಿತ್ಸಾತ್ಮಕ, ನಿವಾರಣಾತ್ಮಕ, ಪುನರ್ವಸತ್ಯಾತ್ಮಕ, ಆರೋಗ್ಯ ಸಂವರ್ಧನಾತ್ಮಕ, ಸಂಶೋಧನಾತ್ಮಕ -ಹೀಗೆ ಹಲವಾರು ಆಯಾಮಗಳಿಂದ ನೋಡಿದಾಗ ಇದು ಒಂದು ಅಧ್ಯಯನ ಗ್ರಂಥವಾಗಿದೆ.

ರೋಗಿಗಳಿಗೆ, ವೈದ್ಯರಿಗೆ, ವೈದ್ಯ ವಿದ್ಯಾರ್ಥಿಗಳಿಗೆ, ಅನ್ವೇಷಕರಿಗೆ, ಅಧ್ಯಯನಶೀಲರಿಗೆ, ಜನಸಾಮಾನ್ಯರಿಗೆ ಈ ಗ್ರಂಥ ಬಹು ಉಪಯುಕ್ತ, ಮಾಹಿತಿಪೂರ್ಣ ಮತ್ತು ಬೋಧಪ್ರದ.

ಶ್ರೀಮಾನ್ ಯೋಗಣ್ಣನವರ "ಸಮಗ್ರ ಆರೋಗ್ಯ ದರ್ಶನ" ರಚನೆ ಶ್ಲಾಘನೀಯವಾದ ಗ್ರಂಥ. ಅವರಿಗೆ ಅಭಿನಂದನೆಗಳು ಹಾಗೂ ಅಭಿವಂದನೆಗಳು ಸಲ್ಲಬೇಕು. ಈ ಗ್ರಂಥದಲ್ಲಿನ ಆಧ್ಯಾತ್ಮಿಕ ಆರೋಗ್ಯ, ಯೋಗ, ಪ್ರಾಣಾಯಾಮ, ಧ್ಯಾನ ಇವು ಎಲ್ಲ ವೈದ್ಯ ಪಠ್ಯಪುಸ್ತಕಗಳ ಅವಿಭಾಜ್ಯ ಅಂಗವಾಗಬೇಕು. ಎಲ್ಲ ವೈದ್ಯಕೀಯ ಮಹಾವಿದ್ಯಾಲಯಗಳ ಬೋಧನಕ್ರಮದಲ್ಲಿ ಇದರ ಅಂಶಗಳನ್ನು ಅಳವಡಿಸಿಕೊಳ್ಳಬೇಕು.

ಭಗವದ್ಗೀತೆಯು ಷಡ್ದರ್ಶನಗಳ (ಸಾಂಖ್ಯ, ಯೋಗ, ನ್ಯಾಯ, ವೈಶೇಷಿಕ, ಮೀಮಾಂಸ, ವೇದಾಂತಗಳ) ಸಾರ, ಆತ್ಮಸಾಕ್ಷಾತ್ಕರಕ್ಕೆ ಕೈಪಿಡಿ. ಭಗವದನುಭವ, ಭಗವದಾನಂದಕ್ಕೆ ಮಾರ್ಗ. ಅಂತೆಯೇ "ಸಮಗ್ರ ಆರೋಗ್ಯ ದರ್ಶನ" ವೈದ್ಯಶಾಸ್ತ್ರಕ್ಕೆ ಒಂದು ಸಂಪೂರ್ಣ ಕೈಪಿಡಿ. ಇದರ ಅಧ್ಯಯನ-ಅನುಷ್ಠಾನಗಳಿಂದ ಜನರಲ್ಲಿ ಆಹಾರ, ವಿಹಾರ, ಆಚಾರ,-ವಿಚಾರ, ವ್ಯಾಯಾಮ, ಪ್ರಾಣಾಯಾಮ-ಧ್ಯಾನ, ಔಷಧಗಳ ಬಗ್ಗೆ ಅರಿವು ಮೂಡಿ, ಸುಧಾರಿತ ಜೀವನ ಶೈಲಿಯನ್ನು ಅಳವಡಿಸಿಕೊಂಡು ಆರೋಗ್ಯ-ಆನಂದಗಳ ಸಾಕ್ಷಾತ್ಕರವಾಗಲಿ. "ನನ್ನ ಆರೋಗ್ಯ ನನ್ನ ಕೈಯಲ್ಲಿ" ಎಂಬ ಆತ್ಮವಿಶ್ವಾಸ, ಆತ್ಮ ಸ್ಥೈರ್ಯ ಎಲ್ಲರಲ್ಲೂ ಮೂಡಲಿ. 'ಆರೋಗ್ಯ ಜೀವನ'ವು ಕರತಲಾಮಲಕದಂತೆ ಸ್ಪಷ್ಟವಾಗಿ ಗೋಚರಿಸಲಿ.

ಈ ಗ್ರಂಥ ಮನೆಮನೆಯ ಬೆಳಕಾಗಿ ಎಲ್ಲರಿಗೂ ಆರೋಗ್ಯ, ಆನಂದಗಳನ್ನು ಕೊಡಲಿ, ಎಲ್ಲಾ ಗ್ರಂಥಾಲಯಗಳಲ್ಲೂ ಲಭ್ಯವಾಗಲಿ ಎಂದು ಹಾರೈಸುತ್ತೇನೆ. ಆರೋಗ್ಯಭಾಗ್ಯ ನಮ್ಮದಾಗಲಿ.

**ಡಾ|| ಸಿ.ಆರ್.ತಿರುಮಲಾಚಾರ್,**
(ನಿವೃತ್ತ ವೈದ್ಯಕೀಯ ಶಿಕ್ಷಣ ನಿರ್ದೇಶಕರು, ಕರ್ನಾಟಕ ಸರ್ಕಾರ) ◆

# ಛಾಯಾಚಿತ್ರಗಳಲ್ಲಿ ಸ್ವಾಮಿ ವಿವೇಕಾನಂದರು

ಕೆ. ಆರ್. ಮೋಹನ್



### ಛಾಯಾಚಿತ್ರ ೧೦೦

ಚಾರ್ಲ್ಸ್ ನೈಲ್‌ಸನ್ ಎಂಬ ಸದ್ಗೃಹಸ್ಥನ ಮನೆಗೆ ಸ್ವಾಮೀಜಿಯವರು ಭೋಜನಕ್ಕೆ ಹೋದಾಗ ತೆಗೆದ ಚಿತ್ರ ಇದು. ನೈಲ್‌ಸನ್‌ನ ಕೋರಿಕೆಯ ಮೇರೆಗೆ, ಸ್ವಾಮೀಜಿಯವರಿಗೆ ಆಸಕ್ತಿ ಇಲ್ಲದಿದ್ದರೂ, ಈ ಚಿತ್ರವನ್ನು ತೆಗೆಸಲಾಯಿತು. ಈ ಚಿತ್ರದ ಹಿನ್ನೆಲೆಯಲ್ಲಿ ತೋಟದಲ್ಲಿ ಬೆಳೆದ ಪುಷ್ಪಗುಚ್ಛಗಳ ಬಳ್ಳಿಗಳಿವೆ. ಈ ಚಿತ್ರದಲ್ಲಿ ಸ್ವಾಮೀಜಿ ನಿರಾಸಕ್ತರಾಗಿ ಕಾಣುತ್ತಾರೆ.



ಛಾಯಾಚಿತ್ರ ೧೦೦



ಛಾಯಾಚಿತ್ರ ೧೦೧

### ಛಾಯಾಚಿತ್ರ ೧೦೧

ಎರಡನೇ ಚಿತ್ರವನ್ನು ಚಾರ್ಲ್ಸ್ ನೈಲ್‌ಸನ್ ತೆಗೆಯುವಾಗ ಸ್ವಾಮೀಜಿಯವರ ಅಭಿಮಾನಿಯೊಬ್ಬ ಅವರನ್ನು ಪ್ರಾರ್ಥಿಸಿದ– "ಸ್ವಾಮೀಜಿ, ನೀವು ನಮಗಾಗಿ ಹಸನ್ಮುಖರಾಗಿ" ಎಂದು. ಸ್ವಾಮೀಜಿ ಕೂಡಲೇ ಒಪ್ಪಿಕೊಂಡರು. ಹಾಗಾಗಿ ಅವರ ನಗುಮುಖ ಈ ಚಿತ್ರದಲ್ಲಿ ಮೂಡಿಬಂದಿದೆ.

ಸ್ಯಾನ್‌ಫ್ರಾನ್ಸಿಸ್ಕೋದಲ್ಲಿನ ಆ ದಿನಗಳಲ್ಲಿ ಸ್ವಾಮೀಜಿಯವರ ಆರೋಗ್ಯ ಬಹುಪಾಲು ಸುಧಾರಿಸುತ್ತ ಬಂದಿತ್ತು. ಆಗ ಅವರಲ್ಲಿ ವಿಶೇಷವಾಗಿ ಕಂಡುಬರುತ್ತಿದ್ದ ಆಂತರ್ಯದ ಅಗಾಧ ಶಾಂತಿಯ ತಂಪನ್ನು ಈ ಚಿತ್ರದಲ್ಲಿ ನಾವು ಕಾಣಬಹುದು.



ಛಾಯಾಚಿತ್ರ ೧೦೨

### ಛಾಯಾಚಿತ್ರ ೧೦೨

ವಿದೇಶ ಪ್ರವಾಸ ಮುಗಿಸಿ ಸ್ವಾಮೀಜಿ ೧೯೦೦ರ ಡಿಸೆಂಬರ್ ೯ ರಂದು ಕೊಲ್ಕತ್ತಕ್ಕೆ ಮರಳಿ ಬಂದರು. ಆಗ ಅವರಿಗೆ ೩೮ ನೆಯ ವರ್ಷ ನಡೆಯುತ್ತಿತ್ತು. ಅವರ ಜೀವನದ ಕೊನೆಯ ಅಧ್ಯಾಯ ಈಗ ಆರಂಭವಾಗಿತ್ತು – ಅವರ ದೇಹಾರೋಗ್ಯ ಅತ್ಯಂತ ಶಿಥಿಲವಾಗಿತ್ತು. ಪೂರ್ವ ಬಂಗಾಳ ಹಾಗೂ ಅಸ್ಸಾಂ ಪ್ರವಾಸ ಮುಗಿಸಿ ಬಂದ ನಂತರ ಸ್ವಾಮೀಜಿಯವರ ಆರೋಗ್ಯ ಮತ್ತಷ್ಟು ಹದಗೆಟ್ಟಿತ್ತು.

ಹವಾ ಬದಲಾವಣೆಯಿಂದ ತಮ್ಮ ಆರೋಗ್ಯ ಸುಧಾರಿಸಬಹುದೆಂದು ಸ್ವಾಮೀಜಿ ಅಸ್ಸಾಮಿನ (ಆಗಿನ) ರಾಜಧಾನಿಯಾಗಿದ್ದ ಸುಂದರ ಪರ್ವತ ತಾಣ ಶಿಲ್ಲಾಂಗ್‌ಗೆ ಹೋದರು. ಅಲ್ಲಿನ ಚೀಫ್ ಕಮೀಷನರ್ ಆಗಿದ್ದ ಸರ್ ಹೆನ್ರಿ ಕಾಟನ್ ಭಾರತದ ಹಿತೈಷಿಯಾಗಿದ್ದರು; ಸ್ವಾಮೀಜಿಯವರಿಂದ ತುಂಬ ಪ್ರಭಾವಿತರಾಗಿದ್ದರು. ಅವರು ಸ್ವಾಮೀಜಿಯವರ ವಾಸ್ತವ್ಯ ಮತ್ತು ಚಿಕಿತ್ಸೆಗೆ ವ್ಯವಸ್ಥೆ ಮಾಡಿಕೊಟ್ಟರು. ಕಾಟನ್ ಅವರ ಕೋರಿಕೆಯ ಮೇರೆಗೆ ಸ್ವಾಮೀಜಿಯವರ ಎರಡು ಭಾವಚಿತ್ರಗಳನ್ನು ತೆಗೆಸಲಾಯಿತು. ಈ ಛಾಯಾಚಿತ್ರಗಳಲ್ಲಿ ಅವರ ಅನಾರೋಗ್ಯ ಕಂಡುಬರುತ್ತಿದೆ. ಶಿಲ್ಲಾಂಗ್‌ನ ಪ್ರತಿಷ್ಠಿತ ಸ್ಟುಡಿಯೋ 'ಘೋಷಾಲ್ ಬ್ರದರ್ಸ್' ನಲ್ಲಿ ಈ ಚಿತ್ರಗಳನ್ನು ತೆಗೆದಿರಬಹುದೆಂದು ಊಹಿಸಲಾಗಿದೆ.

### ಛಾಯಾಚಿತ್ರ ೧೦೩

ಈ ಚಿತ್ರದಲ್ಲಿ ಸ್ವಾಮೀಜಿಯವರ ತುಂಟತನ ಹಾಗೂ ಹುಡುಗಾಟಿಕೆಯ ಸ್ವಭಾವವನ್ನು ಕಾಣಬಹುದು. ಶಿಲ್ಲಾಂಗ್‌ನ ಸ್ಟುಡಿಯೋದ ಹಿನ್ನೆಲೆ ಮತ್ತು ಅಲ್ಲಿರುವ ಪುಷ್ಪಕುಂಡಗಳು ಚಿತ್ರಕ್ಕೆ ಮೆರುಗನ್ನು ನೀಡಿವೆ. ಚಿತ್ರದಲ್ಲಿ ಸ್ವಾಮೀಜಿಯವರ ಅನಾರೋಗ್ಯದ ಛಾಯೆ ಕೂಡ ಕಾಣಿಸುವುದಿಲ್ಲ.


ಛಾಯಾಚಿತ್ರ ೧೦೩

## ಛಾಯಾಚಿತ್ರ ೧೦೪

ಈ ಚಿತ್ರವನ್ನು ಸ್ವಾಮೀಜಿ ಬಹಳ ಅನಾರೋಗ್ಯದಿಂದ ಬಳಲುತ್ತಿದ್ದಾಗ ತೆಗೆಯಲಾಗಿತ್ತು. ಇದೂ ಶಿಲ್ಲಾಂಗ್‌ನಲ್ಲಿ ತೆಗೆದ ಚಿತ್ರ. ಪೂರ್ವ ಬಂಗಾಳದ ಪ್ರವಾಸವನ್ನು ಮುಗಿಸಿ ಬಂದ ನಂತರ ಸ್ವಾಮೀಜಿಯವರ ಆರೋಗ್ಯ ಕ್ಷೀಣಿಸುತ್ತಾ ಬಂದಿತು. ತಮ್ಮ ಆರೋಗ್ಯವನ್ನಾಗಲಿ, ಜೀವನವನ್ನೇ ಆಗಲಿ ಕಾಪಾಡಿಕೊಳ್ಳಬೇಕೆಂಬ ಇಚ್ಛೆ ಈಗ ಸ್ವಾಮೀಜಿಯವರಲ್ಲಿ ಇರಲಿಲ್ಲ. ಅವರು ಮೊದಲಿನಿಂದಲೂ ಹೇಳುತ್ತಿದ್ದರು: "ಸದ್ಯ, ಈ ಜೀವನ ಶಾಶ್ವತವಲ್ಲವಲ್ಲ! ಅದಕ್ಕೆ ನಾವು ಆಭಾರಿಯಾಗಲೇಬೇಕು!"

ಸ್ವಾಮೀಜಿ ತಮ್ಮ ಶಿಷ್ಯ ಶರಚ್ಚಂದ್ರನಿಗೆ ಹೇಳುತ್ತಾರೆ, "ಶ್ರೀರಾಮಕೃಷ್ಣರು ದೇಹತ್ಯಾಗ ಮಾಡುವ ಎರಡು–ಮೂರು ದಿನಗಳಿಗೆ ಮೊದಲು, ಯಾರನ್ನು ಕಾಳಿ ಎಂದು ಅವರು ಕರೆಯುತ್ತಿದ್ದರೋ, ಅವಳು ನನ್ನ ದೇಹದೊಳಕ್ಕೆ ಪ್ರವೇಶಿಸಿಬಿಟ್ಟಳು. ಅವಳು ನನ್ನನ್ನು ಸುಮ್ಮನಿರಲು ಬಿಡುವುದೇ ಇಲ್ಲ. ನಾನು ಕೆಲಸ ಮಾಡುತ್ತಲೇ ಸಾಯಬೇಕೆಂದು ನಿರ್ಧರಿಸಿಬಿಟ್ಟಿದ್ದೇನೆ."


ಛಾಯಾಚಿತ್ರ ೧೦೪

## ಛಾಯಾಚಿತ್ರ ೧೦೫

೧೯೦೧ರ ಮೇ ತಿಂಗಳ ಕೊನೆಯ ಭಾಗದಲ್ಲಿ ಸ್ವಾಮೀಜಿಯವರ ಆರೋಗ್ಯ ಮತ್ತಷ್ಟು ಕ್ಷೀಣಿಸುತ್ತ ಬಂತು. ಸ್ವಾಮಿ ನಿರಂಜನಾನಂದರು ಹಾಗೂ ಇನ್ನಿತರ ಸಹೋದರ ಸಂನ್ಯಾಸಿಗಳು ಕೊಲ್ಕತ್ತಾದ ಪ್ರಸಿದ್ಧ ವೈದ್ಯರೊಬ್ಬರಿಂದ ಚಿಕಿತ್ಸೆ ಪಡೆಯುವಂತೆ ಅವರನ್ನು ಒಪ್ಪಿಸಿದರು. ಅವರ ಚಿಕಿತ್ಸೆ ಅತ್ಯಂತ ಕಠಿಣವಾಗಿತ್ತು. ಆಗ ಸೆಖೆಗಾಲವಾಗಿದ್ದರೂ, ೨೧ ದಿನ ಒಂದು ಹನಿ ನೀರನ್ನೂ ಕುಡಿಯುವಂತಿರಲಿಲ್ಲ; ಒಂದಿಷ್ಟು ಉಪ್ಪನ್ನೂ ಮುಟ್ಟುವಂತಿರಲಿಲ್ಲ. ಸ್ವಾಮೀಜಿ ಈ ಎಲ್ಲ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸಿದರು.

ಚಿಕಿತ್ಸೆ ಮುಗಿದ ಮೇಲೆ ಸ್ವಾಮೀಜಿ ಶರಚ್ಚಂದ್ರನ ಬಳಿ ಹೇಳಿದರು, "ನನ್ನ ಗುರುಭಾಯಿಗಳ ಆಜ್ಞೆಗೆ ನಾನು ವಿಧೇಯನಾಗಿದ್ದೆ. ಏಕೆಂದರೆ ಅವರೆಲ್ಲ ನನ್ನ ನ್ನು ಅದೆಷ್ಟು ಪ್ರೀತಿಸುತ್ತಾರೆ! ಅವರ ಕೋರಿಕೆಯನ್ನು ತಳ್ಳಿಹಾಕಲು ನನ್ನಿಂದ ಸಾಧ್ಯವಿಲ್ಲ."

ಒಟ್ಟಿನಲ್ಲಿ, ಯಾವ ಚಿಕಿತ್ಸೆಯಿಂದಲೂ ಅಂಥ ಪ್ರಯೋಜನವೂ ಕಂಡುಬರಲಿಲ್ಲ. ಆದರೆ ಅವರ ಶರೀರ ಮಾತ್ರ ಮೇಲ್ನೋಟಕ್ಕೆ ಸ್ವಲ್ಪ ತುಂಬಿಕೊಂಡಂತೆ ಕಾಣುತ್ತಿತ್ತು. ◆


ಛಾಯಾಚಿತ್ರ ೧೦೫

# ಚಂದ್ರ ಆರಾಧಿಸಿದ ದೇವ – ಸೋಮನಾಥ

ಕಥೆ : ಈರೋಡ್ ಟಿ. ಕೃಷ್ಣ ಚಿತ್ರ : ಶಂಕರ್

**1** ದಕ್ಷನು ತನ್ನ ರಾಣಿ ಅಸಗ್ನಿಯೊಂದಿಗೆ ಹಿಮಾಲಯದ ತಪ್ಪಲಲ್ಲಿರುವ ರಾಜ್ಯವನ್ನು ಆಳುತ್ತಿದ್ದ. ಅವನಿಗೆ ಐವತ್ತು ಮಂದಿ ಹೆಣ್ಣುಮಕ್ಕಳಿದ್ದರು. ಅವರಲ್ಲಿ ಇಪ್ಪತ್ತೇಳು ಮಕ್ಕಳನ್ನು ಚಂದ್ರನಿಗೆ ಕೊಟ್ಟು ಮದುವೆ ಮಾಡಿದ್ದನು.




**2** ಕೆಲವು ಕಾಲ ಚಂದ್ರ ತನ್ನೆಲ್ಲ ಇಪ್ಪತ್ತೇಳು ಮಂದಿ ಪತ್ನಿಯರನ್ನು ಸಮಾನವಾಗಿ ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದ. ಆದರೆ ಕ್ರಮೇಣ ಅವನು ಸೌಂದರ್ಯ ಮತ್ತು ತಾರುಣ್ಯದಲ್ಲಿ ಎಲ್ಲರನ್ನೂ ಮೀರಿಸಿದ್ದ ರೋಹಿಣಿಯಲ್ಲಿ ಹೆಚ್ಚು ಅನುರಕ್ತನಾದ. ಇದರಿಂದ ಬೇಸತ್ತ ಇತರ ಪತ್ನಿಯರು..



**3** ಚಂದ್ರನ ಇಪ್ಪತ್ತಾರು ಮಂದಿ ಪತ್ನಿಯರು ಅವನ ಬಗ್ಗೆ ತಂದೆಯಲ್ಲಿ ದೂರಿತ್ತರು.




**4**




**5** ಚಂದ್ರನ ಮೇಲೆ ಮಾವನ ಬೈಗುಳ ಯಾವ ಪರಿಣಾಮವನ್ನೂ ಬೀರಲಿಲ್ಲ. ಆಗ ದುಃಖತಪ್ತರಾದ ಅವನ ಇಪ್ಪತ್ತಾರು ಮಂದಿ ಪತ್ನಿಯರು ತಂದೆಯ ಬಳಿಗೆ ಹೋಗಿ ಅತ್ತರು.

**6** ಕೋಪಗೊಂಡ ದಕ್ಷ ಕೂಡಲೇ ಚಂದ್ರನ ಬಳಿಗೆ ಹೋದ.



**7** ದಕ್ಷನ ಶಾಪದಿಂದಾಗಿ ಚಂದ್ರನ ಪ್ರಭೆ ಕ್ಷೀಣಿಸತೊಡಗಿತು. ಹೆದರಿದ ಚಂದ್ರನು ರಕ್ಷಣೆಗಾಗಿ ದೇವತೆಗಳ ಬಳಿಗೋಡಿದ.




**8** ಎಲ್ಲರೂ ಬ್ರಹ್ಮನ ಬಳಿಗಿ ಹೋಗಿ ಚಂದ್ರನಿಂದಾದ ತೊಂದರೆಯನ್ನು ವಿವರಿಸಿದರು.




**9** ಚಂದ್ರನನ್ನು ರಕ್ಷಿಸುವಂತೆ ದೇವತೆಗಳೆಲ್ಲರೂ ಬ್ರಹ್ಮನನ್ನು ಮತ್ತೆ ಮತ್ತೆ ಬೇಡಿಕೊಂಡರು.



**10** ಶಾಪವಿಮೋಚನೆಯ ಮಾರ್ಗವನ್ನು ತಿಳಿದ ಚಂದ್ರನು ಪ್ರವೇಶಕ್ಕೆ ಬಂದ. ಅಲ್ಲಿ ಅವನೊಂದು ಕೆರೆಯನ್ನು ತೋಡಿದ. ಅದಕ್ಕೆ 'ಚಂದ್ರತೀರ್ಥ'ವೆಂದು ಹೆಸರಾಯಿತು. ಕೆರೆಯ ದಡದಲ್ಲಿ ಶಿವಲಿಂಗವನ್ನು ಸ್ಥಾಪಿಸಿ, ಅದಕ್ಕೆ ಚಂದ್ರನು ಪ್ರತಿನಿತ್ಯ ಪೂಜೆ ಮಾಡುತ್ತಿದ್ದ. ಅವನು ಹತ್ತು ಕೋಟಿ ಸಲ ಶಿವನ ನಾಮಜಪವನ್ನು ಮಾಡಿದ.




**11** ಕರುಣಾಸಾಗರನಾದ ಪರಶಿವ ಚಂದ್ರನ ಮುಂದೆ ಪ್ರತ್ಯಕ್ಷನಾದ.




**12**




**13** ಸೋಮ ಎಂಬುದು ಚಂದ್ರನ ಇನ್ನೊಂದು ಹೆಸರು. ಆದ ಕಾರಣ ಪ್ರವೇಶದಲ್ಲಿ ಚಂದ್ರನು ಸ್ಥಾಪಿಸಿದ ಶಿವಲಿಂಗಕ್ಕೆ ಸೋಮನಾಥ ಎಂದು ಹೆಸರಾಯಿತು. ಸೋಮನಾಥದ ಚಂದ್ರತೀರ್ಥದಲ್ಲಿ ಸ್ನಾನ ಮಾಡಿದವರ ಸಂಕಟಗಳೆಲ್ಲ ನಿವಾರಣೆ ಹೊಂದುವುವು ಎಂಬ ನಂಬಿಕೆ ಇಂದಿಗೂ ಪ್ರಚಲಿತವಿದೆ.

ಭಾರತದಲ್ಲಿರುವ ದ್ವಾದಶ ಜ್ಯೋತಿರ್ಲಿಂಗಗಳಲ್ಲಿ ಸೋಮನಾಥವೂ ಒಂದು.

ಗುಜರಾತ್‌ನಲ್ಲಿರುವ ಸೋಮನಾಥ ದೇವಾಲಯವು ಇಂದು ಲಕ್ಷ ಲಕ್ಷ ಮಂದಿ ಯಾತ್ರಿಕರನ್ನು ತನ್ನೆಡೆಗೆ ಆಕರ್ಷಿಸುತ್ತಿದೆ.

# ಶ್ರೀ ಶಾರದಾದೇವಿ ಮಂದಿರದ ಉದ್ಘಾಟನಾ ಸಮಾರಂಭ

## ೨ ಮೇ ೨೦೧೪, ಅಕ್ಷಯ ತೃತೀಯಾ





ಬೆಂಗಳೂರಿನ ಶ್ರೀಶಾರದಾಮಠದ ಮಂದಿರದ ಉದ್ಘಾಟನಾ ಸಮಾರಂಭವು ೨ ಮೇ ೨೦೧೪, ಅಕ್ಷಯ ತೃತೀಯೆಯಂದು ವಿಶೇಷ ಪೂಜೆ, ಹೋಮ, ಭಜನೆ ಮುಂತಾದ ಕಾರ್ಯಕ್ರಮಗಳೊಂದಿಗೆ ಸಾಂಗವಾಗಿ ನೆರವೇರಿತು.

ಮೇ ೧ ರಂದು ಸಂಜೆ ವಾಸ್ತುಹೋಮ ಮತ್ತು ಗಣಪತಿಪೂಜೆ ನೆರವೇರಿತು.

ಮೇ ೨ರಂದು ದಿವ್ಯತ್ರಯರನ್ನು ಬೆಳಗ್ಗೆ ೭ ಗಂಟೆಗೆ ಮಂದಿರ–ಪ್ರದಕ್ಷಿಣೆಯ ನಂತರ ಗರ್ಭಗುಡಿಯಲ್ಲಿ ಇರಿಸಲಾಯಿತು. ಮಂದಿರದ ದ್ವಾರೋದ್ಘಾಟನೆಯು ಶ್ರೀಶಾರದಾ ಮಠ ಮತ್ತು ರಾಮಕೃಷ್ಣ–ಶಾರದಾ ಮಿಷನ್ನಿನ ಅಧ್ಯಕ್ಷರಾದ ಪರಮಪೂಜ್ಯ ಭಕ್ತಿಪ್ರಾಣಾ ಮಾತಾಜಿಯವರಿಂದ ನಡೆಯಿತು. ನಂತರ ಪೂಜ್ಯ ಮಾತಾಜಿಯವರು ದಿವ್ಯತ್ರಯರಿಗೆ ಅರ್ಘ್ಯವನ್ನಿತ್ತು ಆರತಿಯನ್ನು ಬೆಳಗಿದರು. ೭.೩೦ಕ್ಕೆ ವಿಶೇಷ ಪೂಜೆಯನ್ನೂ, ದುರ್ಗಾ–ಸಪ್ತಶತೀ ಪಠಣವನ್ನೂ ಪ್ರಾರಂಭಿಸಲಾಯಿತು. ೯ಗಂಟೆಗೆ ಮಂದಿರದ ಕೆಳಗೆ 'ಜಗದ್ಧಾತ್ರಿ' ಗುಂಪಿನ ಭಕ್ತೆಯರು ಲಲಿತಾ ಸಹಸ್ರನಾಮ ಪಠಿಸಿ, ಭಜನೆಗಳನ್ನು ಹಾಡಿದರು.



ಹೋಮದ ನಂತರ ದೇವಾಲಯವನ್ನು ವಿಧಿವತ್ತಾಗಿ ಶ್ರೀರಾಮಕೃಷ್ಣರಿಗೆ ಅರ್ಪಿಸಲಾಯಿತು. ಸಂಜೆ ರಾಮನಾಮ ಸಂಕೀರ್ತನೆಯ ನಂತರ ಪೂರ್ಣಿಮಾ ಗಂಗೂಲಿ ಹಾಗೂ ಸಂಗಡಿಗರಿಂದ ಭಜನೆ. ಸಂಧ್ಯಾರತಿಯ ನಂತರ ಕಾಲೀಕೀರ್ತನೆಯೊಂದಿಗೆ ಅಂದಿನ ಕಾರ್ಯಕ್ರಮ ಮುಕ್ತಾಯವಾಯಿತು. ಅಂದು ಮಧ್ಯಾಹ್ನ ೨೩೦೦ ಭಕ್ತರು ಪ್ರಸಾದ ಸ್ವೀಕರಿಸಿದರು, ಬೆಳಗ್ಗೆ ಕೂಡ ೭೦೦ ಮಂದಿ ಭಕ್ತರು ಪ್ರಸಾದ ಸ್ವೀಕರಿಸಿದರು.

ಮೇ ೩ ರಂದು ಬೆಳಗ್ಗೆ ೭ ರಿಂದ ೯ ರ ವರೆಗೆ ಸ್ತ್ರೀಭಕ್ತರಿಂದ ಸಾಮೂಹಿಕ ಚಂಡೀಪಾರಾಯಣ ನಡೆಯಿತು. ನಂತರ ಡಾ. ವಿಜಯಭಾರತಿ ಮತ್ತು ಸಂಗಡಿಗರು ಶ್ರೀಶಾರದಾ ಸಹಸ್ರನಾಮವನ್ನು ಪಠಿಸಿದರು. ಅಂದು ಮಧ್ಯಾಹ್ನ ೭೦೦ ಭಕ್ತರು ಪ್ರಸಾದ ಸ್ವೀಕರಿಸಿದರು. ಸಂಜೆ ೪.೩೦ ಕ್ಕೆ ನಡೆದ ಸಭೆಯಲ್ಲಿ ಪರಮಪೂಜ್ಯ ಭಕ್ತಿಪ್ರಾಣಾ ಮಾತಾಜಿಯವರು ತಮ್ಮ ಆಶೀರ್ವಚನವನ್ನು ನೀಡಿದರು. ಅಲ್ಲದೆ, ತ್ರಿಚೂರಿನ ಶ್ರೀಶಾರದಾಮಠದ ಅಧ್ಯಕ್ಷರಾದ ಪೂಜ್ಯ ಅಜಯಪ್ರಾಣಾ ಮಾತಾಜಿಯವರೂ, ಶ್ರೀಶಾರದಾಮಠ ಮತ್ತು ರಾಮಕೃಷ್ಣ–ಶಾರದಾ ಮಿಷನ್ನಿನ ಕಾರ್ಯದರ್ಶಿಗಳಾದ ಪೂಜ್ಯ ಅಮಲಪ್ರಾಣಾ ಮಾತಾಜಿಯವರೂ ಡಾ. ವಿಜಯಭಾರತಿಯವರೂ ಸಭೆಯನ್ನುದ್ದೇಶಿಸಿ ಮಾತನಾಡಿ, ರಾಮಕೃಷ್ಣ–ಶಾರದಾ ಆಂದೋಲನದಲ್ಲಿ ಮಂದಿರಗಳ ಮಹತ್ವ ಹಾಗೂ ಆವಶ್ಯಕತೆಯ ಬಗ್ಗೆ ವಿವರಿಸಿದರು. ಸಂಧ್ಯಾರತಿಯ ನಂತರ ಶ್ರೀಮತಿ ಕ್ಷಿತಿಜಾ ರವಿಯವರಿಂದ ಶ್ರೀರಾಮಕೃಷ್ಣ–ಶಾರದಾ ಜೀವನ, ಚರಿತ್ರೆಯನ್ನಾಧರಿಸಿದ ಭರತನಾಟ್ಯ ಪ್ರದರ್ಶನವಿತ್ತು.

ಮೇ ೪ ರಂದು ಬೆಳಗ್ಗೆ ಪೂಜನೀಯ ಅಧ್ಯಕ್ಷ ಮಾತಾಜಿಯವರು ೨೭ ಮಂದಿ ದೀಕ್ಷಾರ್ಥಿಗಳಿಗೆ ಮಂತ್ರದೀಕ್ಷೆಯನ್ನು ನೀಡಿದರು. ೧೦.೩೦ಕ್ಕೆ ಶ್ರೀ ಶಂಕರಾಚಾರ್ಯರ ಜಯಂತಿಯನ್ನು ಉಪನ್ಯಾಸ ಹಾಗೂ ಭಜನೆಗಳೊಂದಿಗೆ ಆಚರಿಸಲಾಯಿತು. ಮಧ್ಯಾಹ್ನ ೭೦೦ ಭಕ್ತರು ಪ್ರಸಾದ ಸ್ವೀಕರಿಸಿದರು.

ಸಂಜೆ ೪ ಗಂಟೆಗೆ ಸ್ವಾಮಿ ವಿವೇಕಾನಂದರ ೧೫೦ನೆಯ ಜಯಂತ್ಯುತ್ಸವದ ಪ್ರಯುಕ್ತ 'ವಿಶ್ವ ಧರ್ಮ'ದ ಬಗ್ಗೆ ವಿಚಾರಗೋಷ್ಠಿಯನ್ನು ಏರ್ಪಡಿಸಲಾಗಿತ್ತು. ಮೂವರು ಭಕ್ತರೂ, ಮೂವರು ಸಂನ್ಯಾಸಿನಿಯರೂ ವಿಶ್ವಧರ್ಮದ ವಿವಿಧ ಭಾವಗಳ ಬಗ್ಗೆ ತಮ್ಮ ವಿಚಾರವನ್ನು ಮುಂದಿಟ್ಟರು. ಈ ಸಂದರ್ಭದಲ್ಲಿ ಸ್ವಾಮಿ ವಿವೇಕಾನಂದರ ೧೫೦ನೆಯ ಜಯಂತ್ಯುತ್ಸವದ ಪ್ರಯುಕ್ತ ಮುದ್ರಿಸಲಾದ 'ದೀಪಧಾರಿ ಮಾಲಿಕೆ'ಯ ೪ನೆಯ ಪುಸ್ತಿಕೆಯಾದ 'ಸೋದರಿ ಸುಬ್ಬಲಕ್ಷ್ಮಿ' ಮತ್ತು ಶಾಲಾ ಮಕ್ಕಳನ್ನು ಮನಸ್ಸಿನಲ್ಲಿಟ್ಟುಕೊಂಡು ಮುದ್ರಿಸಲಾದ ಭಜನೆಯ ಪುಸ್ತಕ 'ನಿವೇದನೆ'ಯನ್ನು ಪೂಜ್ಯ ಅಜಯಪ್ರಾಣಾ ಮಾತಾಜಿಯವರು ಬಿಡುಗಡೆಗೊಳಿಸಿದರು. ಸಂಧ್ಯಾರತಿಯ ನಂತರ ರೂಪಾ ರವೀಂದ್ರನ್ ಮತ್ತವರ ವಿದ್ಯಾರ್ಥಿನಿಯರಿಂದ 'ಪಾರ್ವತಿ ಮಾಂಗಲ್ಯ ಧಾರಣ' ಎಂಬ ಕಥಕ್ ನೃತ್ಯರೂಪಕದ ಪ್ರದರ್ಶನದೊಂದಿಗೆ ಅಂದಿನ ಕಾರ್ಯಕ್ರಮ ಮುಕ್ತಾಯಗೊಂಡಿತು. ಮಂದಿರ ಉದ್ಘಾಟನೆಯ ಈ ಕಾರ್ಯಕ್ರಮಕ್ಕೆ ಶ್ರೀಶಾರದಾಮಠದ ವಿವಿಧ ಶಾಖಾಕೇಂದ್ರಗಳಿಂದ ಹಲವಾರು ಸಂನ್ಯಾಸಿನಿಯರೂ, ಭಕ್ತರೂ ಆಗಮಿಸಿದ್ದರು. 

Managing Editor : Swami Muktidananda
Editor : Swami Vireshananda

Printed and Published by Swami Muktidananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.D-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

# ಪ್ರವಾಸ 2014 ರೈಲು ಹಾಗೂ ಬಸ್ಸಿನಲ್ಲಿ

## ಹೋಟೆಲ್ ರೂಂ ಹಾಗೂ ನಮ್ಮ ಊಟೋಪಚಾರದೊಂದಿಗೆ

### ಗುಜರಾತ್ - ರಾಜಾಸ್ಥಾನ ಸ್ಪೆಷಲ್ : 19 ದಿನಗಳು

Oct 02 Nov 06

ಪುಷ್ಕರ, ಅಜ್ಮೀರ್, ಜೈಸಲ್ಮೇರ್, ಬಿಕನೇರ್, ಜೋಧ್‌ಪುರ್, ಜೈಪುರ, ನಾಥದ್ವಾರ, ಕಾಂಕ್ರೋಲಿ, ಏಕಲಿಂಗ್ಜಿ, ಉದಯಪುರ, ಮೌಂಟ್ ಅಬು, ಮಾತೃಗಯಾ, ದ್ವಾರಕ, ಬೇಟ್‌ದ್ವಾರಕ, ನಾಗೇಶಂ, ಮೂಲ ದ್ವಾರಕ, ಪೋರಬಂದರ್, ವಿರಾವಲ್, ಸೋಮನಾಥ್, ಡಾಕೋರ್, ಅಹಮದಾಬಾದ್

### ಅಮರನಾಥ್ - ವೈಷ್ಣವಿ ದೇವಿ : 19 ದಿನಗಳು

June 25 July 01

### ಕಾಶಿ - ನೇಪಾಳ (ಮುಕ್ತಿನಾಥ್) : 16 ದಿನಗಳು

Oct 05

ಕಾಶಿ, ಅಯೋಧ್ಯಾ, ಕಠ್ಮಂಡು, ಪೋಖ್ರಾ, ಮುಕ್ತಿನಾಥ್ (Optional), ಮನೋಕಾಮನ, ಘೋರಖ್‌ಪುರ್

### ಶಕ್ತಿಪೀಠಗಳು ಮತ್ತು ಸಿಮ್ಲಾ ಮನಾಲಿ ಸ್ಪೆಷಲ್ : 20 ದಿನಗಳು

Sep 01, Oct 02

ಚಂಡೀಘರ್, ಸಿಮ್ಲಾ, ಕುಫ್ರಿ, ಕುಲು ಮನಾಲಿ, ರೋತಾಂಗ್ ಪಾಸ್ (Optional), ವಶಿಷ್ಠ, ಬೈಜ್‌ನಾಥ್, ಚಾಮುಂಡ, ನೈನಾದೇವಿ, ಖಾಂಗ್ರಾ, ಚಿಂತಪೂರ್ಣಿ, ಜ್ವಾಲಾಮುಖಿ, ಧರ್ಮಶಾಲಾ, ವೈಷ್ಣವೀದೇವಿ, ವಾಘಾ ಬಾರ್ಡರ್ (ಇಂಡೋ-ಪಾಕ್ ಬಾರ್ಡರ್), ಅಮೃತ್‌ಸರ್, ಕುರುಕ್ಷೇತ್ರ, ಶಾಕಂಬರಿ, ಹರಿದ್ವಾರ, ನವದೆಹಲಿ

### ಕೋಲ್ಕತ್ತಾ - ಡಾರ್ಜಿಲಿಂಗ್ - ಪೂರಿ : 16 ದಿನಗಳು

Oct 25, Nov 08

ಡಾರ್ಜಿಲಿಂಗ್, ಗ್ಯಾಂಗ್‌ಟಕ್, ಸಿಲಿಗುರಿ, ಕೋಲ್ಕತ್ತಾ, ಪೂರಿ, ಕೊನಾರ್ಕ್, ಚಿಲ್ಕ ಲೇಕ್, ಭುವನೇಶ್ವರ್

### ಕಾಶಿ - ಗಯಾ - ಪ್ರಯಾಗ್ : 12 ದಿನಗಳು

Oct 27, Nov 06

ಅಲಹಾಬಾದ್, ಗಯಾ, ಬುದ್ದಗಯಾ, ಕಾಶಿ, ಸಾರಾನಾಥ್, ಅಯೋಧ್ಯಾ

### ದ್ವಾರಕ ಮತ್ತು ಅಷ್ಟ ಜ್ಯೋತಿರ್ಲಿಂಗ : 24 ದಿನಗಳು

Oct 27, Nov 17

ಪುಷ್ಕರ, ನಾಥದ್ವಾರ, ಕಾಂಕ್ರೋಲಿ, ಏಕಲಿಂಗ್ಜಿ, ಉದಯಪುರ, ಮೌಂಟ್ ಅಬು, ಮಾತೃಗಯಾ, ಶಿರಡಿ, ದ್ವಾರಕ, ಬೇಟ್‌ದ್ವಾರಕ, ನಾಗೇಶಂ, ಮೂಲ ದ್ವಾರಕ, ಪೋರಬಂದರ್, ವಿರಾವಲ್, ಸೋಮನಾಥ್, ಡಾಕೋರ್, ಅಹಮದಾಬಾದ್, ಉಜ್ಜೈನಿ, ಓಂಕಾರೇಶ್ವರ, ಪರ್ಲಿ, ಔರಂಗಾಬಾದ್, ಘೃಷ್ಣೇಶ್ವರ, ನಾಸಿಕ್, ತ್ರಿಯಂಬಕ್, ಶಿರಡಿ, ಶನಿಸಿಂಗನಾಪುರ, ಭೀಮಾಶಂಕರ್



## ಶ್ರೀ ಹನ್ಸಾ ಟ್ರಾವೆಲ್ಸ್
## SHRI HANSAA TRAVELS

**RECOGNISED BY DEPARTMENT OF TOURISM, GOVT. OF KARNATAKA**

No. 640, 40th Cross (Near Prabha Eye Clinic), 8th Block, Jayanagar, Bangalore - 560 070.
☎: (080) 26543891 / 26643276 Mobile : (0) 9341415612 / 9341215612
e-mail : hansaatravels@gmail.com web : www.hansaatravels.com

VIVEKA PRABHA (KANNADA MONTHLY)
June 2014, Vol.15, No.06, No. of pages : 44

Registered With Registrar of News Papers Of India
under 72356/2000.postal Regn.No.KA/SK/MYS/480/
2012-14. LICENCED TO POST W.P.P.AT YADAVAGIRI
MYSORE 570 020,VIDE LICENCE NO.SK/WPP/MYS/155/2013-15



Printed at mayur graphics,Bangalore